# ಸೊಗಸಿನ ಕಥೆ

## ಭಾಗ ೨

ಸಾನೆ ಗುರುಜಿ



ಅನುವಾದಕ

ಭಾಸ್ಕರ ಗೋವಿಂದರಾವ ಗೋಖಲೆ

ಎಲ್. ಎಲ್. ಬಿ.

೧೯೪೮.] [ಬೆಲೆ ೧—೦—೦

# ಕವಿ ಮಾತು.



ಸೊಗಸಿನ ಕಥೆಗಳ ಎರಡನೇ ಭಾಗ ಇದು. ಮೂಲತಃ ಈ ಕಥೆ ನನ್ನವೂ ಅಲ್ಲ. ಮೊದಲನೆಯ ಕಥೆ " ಸಗ್ಗದ ಪೂವಾಲೆ " ಬಹಳ ವರ್ಷಗಳ ಹಿಂದೆ ' ಟ್ರಿಝುರ ಚೆಸ್ಟ ' ದಿಂದ ಓದಿದ್ದು. ಇದನ್ನು ಬಹಳ ಜನರಿಗೆ ನಾನು ಹೇಳಿದೆ. ನನ್ನ ಶೈಲಿಯಲ್ಲಿ, ಭಾಷೆಯಲ್ಲಿ ಹೇಳಿದೆ. ನಡುವೆ ನನ್ನ ವಿಚಾರಗಳನ್ನು ಹೇಳಿದ್ದೇನೆ. ಈ ಕಥೆಯನ್ನು ಇದರಲ್ಲಿ ಸಮಾವೇಶ ಮಾಡಿದ್ದೇನೆ. ಎರಡನೆಯ ಕಥೆ " ಜಾಯಿ " ಇಂಗ್ಲೀಷ ಭಾಷೆಯಲ್ಲಿ " ಡೋರಾ " ಎಂಬ ಒಂದು ಅಂದವಾದ ಕವಿತೆ ಇದೆ. ಆ ಕವಿತೆಯಲ್ಲಿ ಓದಿದ ಕಥೆಯನ್ನು ನನ್ನ ನೆನಪಿನ ಮೇಲಿಂದ ಬರೆದಿದ್ದೇನೆ. ಮೂರನೆಯ ಕಥೆ "ವೇಣುವಾದಕ" "ಶಿಶುಸಾಥಿ" ಎಂಬ ವಂಗ ಮಾಸಿಕ ಪತ್ರಿಕೆಯಲ್ಲಿ ಓದಿದ್ದು. ನೆನಪಿನ ಶಕ್ತಿಯ ಮೇಲೆ ವಿಶ್ವಾಸವಿಟ್ಟು ಬರೆದಿದ್ದೇನೆ. " ಕಂಬನಿಯ ಕೆರೆ " ನಾಲ್ಕನೆಯ ಕಥೆ. ೧೨-೧೩ ವರ್ಷಗಳ ಹಿಂದೆ ಹಿಂದಿ ಸಾಪ್ತಾಹಿಕದಲ್ಲಿ ಓದಿದ್ದು. ನೆನೆಸಿ ಬರೆದಿದ್ದೇನೆ. ಅದರಲ್ಲಿ ಹೊಸ ವಿಚಾರಗಳನ್ನು ಸೇರಿಸಿದ್ದೇನೆ. ಐದನೆಯ ಕಥೆ " ಭಾವವಿದ್ದಲ್ಲಿ ದೇವ." ಮೂಲ ಲೇಖಕರು ಸ್ವಾಮಿ ವಿವೇಕಾನಂದರು. ಭಗಿನಿ ನಿವೇದಿತಾ ದೇವಿ ಅವರು ಅದನ್ನು ಇಂಗ್ಲಿಷಿನಲ್ಲಿ ಅನುವಾದಿಸಿದ್ದಾರೆ. ಅದನ್ನೇ ನನ್ನ ರೀತಿಯಲ್ಲಿ ನಾನು ಮರಾಠಿಯಲ್ಲಿ ಬರೆದಿದ್ದೇನೆ. ಇದು ಅನುವಾದವಲ್ಲ. ಆರನೆಯ ಕಥೆ " ದೊಡ್ಡ ತ್ಯಾಗ. " ಬಂಗಾಲದ ಸುಪ್ರಸಿದ್ಧ ವೈಷ್ಣವ ದಾಸರಾದ ಚೈತನ್ಯರ ಜೀವನದಲ್ಲಿ ಆಗಿಹೋದ ಒಂದು ಪ್ರಸಂಗದ ಮೇಲೆ ಆಧರಿಸಿ ಬರೆದ ಸತ್ಯಕಥೆ.

ಇದು ಒಂಬತ್ತು ಕಥೆಗಳ ಭಾಗವಿದೆ. ಆದರೆ ಇಲ್ಲಿ ಆರು ಕಥೆ ಮಾತ್ರ ಕೊಡಲಾಗಿದೆ. ಇವು ಅನುವಾದಗಳಲ್ಲ. ಸೆರೆಮನೆಯಲ್ಲಿದ್ದಾಗ, ಹೊರಗೆ ಇದ್ದಾಗ, ನೂರಾರು ಹುಡುಗರಿಗೆ ಈ ಕಥೆಗಳನ್ನು ನನ್ನದೇ ಆದ ರೀತಿಯಲ್ಲಿ ಹೇಳಿದ್ದೇನೆ. ಹುಡುಗರು ಈ ಕಥೆಗಳನ್ನು ಬರೆದು ಇಡಿರಿ ಎಂದು ಹೇಳಿದರು. ಅವರಿಗಾಗಿ ಬರೆದೆ. ಹಳ್ಳಿಗಳಲ್ಲಿ ಹೇಳಲಿಕ್ಕೆ ತಮಗೆ ಅನುಕೂಲವಾಗುವದೆಂದು ಅವರ ನಂಬುಗೆ. ಕಥೆ ಎಂದರೆ ಮಿಠಾಯಿ. ಮಿಠಾಯಿ ಕೊಟ್ಟರೆ ಹುಡುಗರಿಗೆ ಆನಂದ. ಈ ಕಥೆಗಳನ್ನು ನನ್ನ ಭಾಷೆಯಲ್ಲಿ, ನಡನಡುವೆ ನನ್ನ ವಿಚಾರಗಳನ್ನು ಸೇರಿಸಿದ್ದರೂ ಇವುಗಳ ಶ್ರೇಯಸ್ಸು ನನ್ನದಲ್ಲ. ಅದು ಈ ಕಥೆಗಳ ಮೂಲಲೇಖಕರ ಕಲ್ಪನಾ

ಚಾತುರ್ಯಕ್ಕೆ ಸೇರಿದ್ದು. ಈ ಸರಕು ಬೇರೆಯವರದು. ಅದನ್ನು ಹಂಚುವವ ನಾನು. ಈ ಸರಕು ಹುಡುಗರೆಲ್ಲರ ಮೆಚ್ಚುಗೆ ಪಡೆಯುವದೆಂದು ನಾನು ನಂಬಿದ್ದೇನೆ.

ಸಾನೆ ಗುರುಜಿ

---

## —: ಅನುವಾದಕನ ಮಾತು :—

ಕನ್ನಡ ಕಂದರ ಕೈಯಲ್ಲಿ ಸೊಗಸಾದ ಕಥೆಗಳ ಎರಡನೆಯ ಭಾಗ ಕೊಡುವುದರಲ್ಲಿ ನನಗೊಂದು ವಿಶೇಷ ಆನಂದ. ಮಹಾರಾಷ್ಟ್ರದಲ್ಲಿ ಸಾನೆ ಗುರುಜಿಯವರ ಕಥೆಗಳು ಎಲ್ಲ ಓದುಗರ ಮನೆಯಲ್ಲಿ ಕಾಣುವವು. ಈಗಾಗಲೇ ಅವರ ಕಥೆಗಳು ೩ನೇ ಆವೃತ್ತಿ ಅಚ್ಚು ಆಗಿವೆ. ಇದರಿಂದ ಅವು ಜನರ ಮೆಚ್ಚುಗೆಗೆ ಪಾತ್ರವಾದದ್ದನ್ನು ನಾವು ಕಾಣಬಹುದು.

ಕನ್ನಡ ಕಂದರಿಗೂ ಇವು ಸೇರುವವೆಂದು ನನ್ನ ನಂಬುಗೆ.

ಗದಗ ಭಾಸ್ಕರ

೧೩-೭-೪೫

---

## —: ಪ್ರಕಾಶಕರ ಮಾತು :—

ಈ ಪುಸ್ತಕದ ಪ್ರಕಟನೆಯ ಕಾರ್ಯದಲ್ಲಿ ನಮ್ಮ ಮಿತ್ರರಾದ ಶ್ರೀ. ಗುರುನಾಥ ಜೋಶಿ ಇವರ ಸಹಾಯವು ನಮಗೆ ದೊರಕಿತು. ಅದಕ್ಕಾಗಿ ಅವರ ಆಭಾರ ಮನ್ನಿಸುವೆನು. ಇದಲ್ಲದೇ ಈ ಪ್ರಕಟನೆಯು ಬೇಗನೇ ಹೊರಬೀಳಬೇಕಾದರೆ ವಸಂತ ಪ್ರೆಸ್ಸಿನ ಒಡೆಯರಾದ ಶ್ರೀ. ಹುಕ್ಕೇರಿಕರರು ನಮಗೆ ಬಹಳೇ ಸಹಾಯ ನೀಡಿದರು. ಅವರಿಗೂ ನಾನು ಆಭಾರಿಯಾಗಿದ್ದೇನೆ.

ಅನಂತ ಸಾತೆ

---

## —: ಅನುಕ್ರಮಣಿಕೆ :—

# ಸಗ್ಗದ ಪೂಮಾಲೆ.



ಆ ಊರ ಹೆಸರು ಆಮೋದ. ಅದು ಒಂದು ಅಂದವಾದ ಊರು. ಹೆಸರಿಗೊಪ್ಪುವಂತೆಯೆ ಆ ಊರ ಕೀರ್ತಿ. ಆಮೋದ ಎಂದರೆ ಸುವಾಸನೆ ಊರಲ್ಲಿದ್ದ ಜನರು ಸುಖದಿಂದ ಬಾಳುತ್ತಿದ್ದರು. ಊರು ಸ್ವಚ್ಛವಾಗಿತ್ತು. ವೇತ್ರವತಿ ನದಿಯಿಂದ ಊರಿಗೆ ಮತ್ತಿಷ್ಟು ಶೋಭೆ ಬಂದಿತ್ತು. ನದಿಯ ದಂಡೆಯ ಮೇಲೆ ಮುಂಜಾನೆ-ಸಂಜೆ ಹುಡುಗರು, ಗಂಡುಸರು ಹೆಂಗುಸರು ತುಂಬಾ ನೆರೆಯುತ್ತಿದ್ದರು. ದನಕರುಗಳೂ ಜಂಗುಳಿಯಾಗಿರುತ್ತಿದ್ದವು.

ಆಮೋದ ಊರು ಔದಾರ್ಯಕ್ಕೆ ಪ್ರಸಿದ್ಧವಾಗಿತ್ತು. ಜನ ಬಹಳ ಒಳ್ಳೆಯವರು. ಒಬ್ಬರಿಗೊಬ್ಬರು ಸಹಾಯ ನೀಡುತ್ತಿದ್ದರು; ಯಾರೂ ಯಾರ ನ್ಯೂನತೆ, ಕೊರತೆ ನೋಡುತ್ತಿದ್ದಿಲ್ಲ; ಯಾರನ್ನೂ ದ್ವೇಷಿಸುತ್ತಿದ್ದಿಲ್ಲ. ಆದರೆ ಈಗ ಕೆಲವು ದಿನಗಳಿಂದ ಆ ಊರಲ್ಲಿ ಕೆಲವೊಂದು ಬದಲಾವಣೆ ಕಂಡುಬಂದಿತ್ತು. ಮೊದಲಿನಂತೆ ಆ ಊರ ಪರಿಸ್ಥಿತಿ ಇದ್ದಿಲ್ಲ. ಪ್ರೇಮವು ಕಡಿಮೆಯಾಗಿತ್ತು. ಸಹಾನುಭೂತಿ ಅಷ್ಟೊಂದು ಕಂಡುಬರುತ್ತಿದ್ದಿಲ್ಲ. ಪ್ರತಿಯೊಬ್ಬನು ತನ್ನಷ್ಟಕ್ಕೆ ತನ್ನನ್ನು ನೋಡಿಕೊಳ್ಳುತ್ತಿದ್ದ. ಎಲ್ಲರೂ ಅಧಿಕಾರ, ಮಾನ ಇವುಗಳಿಗಾಗಿ ಸುಳದಾಡುತ್ತಿದ್ದರು. ಊರೊಳಗಿದ್ದ ಸುಖ ಲೋಪವಾಯಿತು. ಬಡಿದಾಟ ತಲೆದೋರತೊಡಗಿದವು. ಊರ ಕಳೆ ಕಡಿಮೆಯಾಗುತ್ತ ಹೋಯಿತು.

ಈ ಊರನ್ನು ಕುರಿತು ಒಂದು ಆಖ್ಯಾಯಿಕೆ ಇತ್ತು. ಪ್ರತಿ ವರ್ಷ ದೀಪಾವಳಿಗೆ ಸ್ವರ್ಗೀಯ ಮಾಲೆಯೊಂದು ಈ ಊರಿಗೆ ಬರುತ್ತಿತ್ತು. ಎಲ್ಲಕ್ಕೂ ಮಿಗಿಲಾದ ಉಪಯುಕ್ತವಾದ ದಾನ ಮಾಡಿದವನ ಕೊರಳಲ್ಲಿ ಈ ಮಾಲೆ ಬೀಳುತ್ತಿತ್ತಂತೆ. ದೇವರ ಮನೆಯ ಮಾಲೆ ಅದು. ಅದರ ಪರಿಮಳ

ಹೆತ್ತು ದಿಕ್ಕಿನಲ್ಲಿ ಹಬ್ಬುತ್ತಿತ್ತು. ಆದರೆ ಇತ್ತ ಈ ಹನ್ನೆರಡು ವರುಷ, ಇಂಥ ಮಾಲೆ ಆ ಊರಿಗೆ ಬರಲೆ ಇಲ್ಲ. ಊರ ಪುಣ್ಯ ತೀರಿದಂತೆ ಕಂಡುಬರುತ್ತದೆ. ದೇವರ ಮನಸಿಗೆ ಬರುವಂಥ ಕಾಣಿಕೆ ಯಾರೂ ಕೊಟ್ಟಿಲ್ಲವೆಂದು ತೋರುತ್ತದೆ

ಆದರೆ ಈ ವರ್ಷ ಸಗ್ಗದ ಪೂಮಾಲೆ ಬರುತ್ತದೆಂದು ಜನವಾರ್ತೆ। ಈ ರೀತಿ ಯಾರೋ ಒಬ್ಬರು ಭವಿಷ್ಯ ಹೇಳಿದ್ದರೆಂದು ತೋರುತ್ತದೆ; ಜನರ ಊಹೆ ಸುರುವಾಯಿತು– "ಯಾರ ಕೊರಳಲ್ಲಿ ಬೀಳುವದು ಈ ಮಾಲೆ ?" ಕೆಲ ಸಂದೇಹ ರಾಯರು, ನಾಸ್ತಿಕರು "ಆ ದಿವಸ ಹೋದವು. ಇನ್ನೆಲ್ಲೀ ಮಾಲೆ !" ಅಂದರು.

ಆ ಊರಲ್ಲಿ ಓರ್ವ ಸಿರಿವಂತ ಜಮೀನದಾರನಿದ್ದ. ಅವನ ಮನೆ ಅಂದವಾಗಿತ್ತು. ಅವನಿಗೆ ಗಂಡಸು ಮಕ್ಕಳಿದ್ದಿಲ್ಲ; ಮೂವರು ಹೆಣ್ಣು ಮಕ್ಕಳಿದ್ದರು. ಅವರು ಚೆಲುವಾಗಿದ್ದರು; ಅವರ ಹೆಸರೂ ಒಳ್ಳೇ ಸೊಗಸಾಗಿದ್ದವು— ಹೀರಾ, ಮಾಣಿಕ ಮತ್ತು ರೂಪಾ ಎಂದು. ಅವರ ಮನೆಯಲ್ಲಿ ಕೆಲಸ ಮಾಡುವವಳ ಹೆಸರು ಸಖೂ ಎಂದು ಇತ್ತು.

ಸಖೂನ ತಾಯಿ ಬಡವಿ. ಕೂಲಿ ಮಾಡಿ ಹೊಟ್ಟೆಹೊರಿಯುತ್ತಿದ್ದಳು. ಅವಳ ಗಂಡ ಸತ್ತಿದ್ದ. ಸಖೂ ಒಬ್ಬಳೇ ಅವಳ ಮಗಳು. ಅವಳು ಇತ್ತಿತ್ತಲಾಗಿ ಆಮೋದಕ್ಕೆ ಬಂದಿದ್ದಳು. ಸಖೂ ಅಷ್ಟು ಚಿಕ್ಕವಳೂ ಇದ್ದಿಲ್ಲ. ಹನ್ನೆರಡು ಹದಿಮೂರು ವರುಷದವಳಾಗಿದ್ದಳು. ಜಮೀನದಾರನ ಹುಡುಗಿಯರ ಓರಗಿಯವಳೇ ಇದ್ದಳು. ಅವಳು ಮಮತೆಯ ಸ್ವಭಾವದವಳು, ಪ್ರಾಮಾಣಿಕಳು ಇದ್ದಳು. ಆಲಸ್ಯವಿಲ್ಲದೆ ಕೆಲಸವನ್ನು ಚೆನ್ನಾಗಿ ಮಾಡುತ್ತಿದ್ದಳು.

ಒಂದು ದಿನ ಊರಿಗೆ ಕೆಲವೊಂದು ಸಾಮಾನುಗಳು ಕಳಿಸುವದಿದ್ದವು; ಅವನ್ನು ಚೆನ್ನಾಗಿ ಕಟ್ಟುವ ಕೆಲಸದಲ್ಲಿ ಹೀರಾ, ಮಾಣಿಕ ಮತ್ತು ರೂಪಾ ತೊಡಗಿದ್ದರು. ಆಗ ಅವರ ಮಾತು ನಡೆದಿದ್ದವು—

ಹೀರಾ ಅಂದಳು "ನನ್ನ ಕಾಣಿಕೆಯನ್ನು ದೇವರು ಮೆಚ್ಚುವನು. ನನಗೆ ಕಾಣಿಕೆಯಾಗಿ ಬಂದ ಪುಸ್ತಕವನ್ನೇ ನಾನು ನನ್ನ ಗೆಳತಿಗೆ ಕಳುಹಿಸುತ್ತಿದ್ದೇನೆ. ತಮಗೆ ಸಿಕ್ಕ ಕಾಣಿಕೆ ಯಾರಾದರೂ ಎರಡನೆಯವರಿಗೆ ಕಳಿಸುವದುಂಟೆ ? ಆದರೆ ನಾನು ಹಾಗೆ ಮಾಡುತ್ತ ಇದ್ದೇನೆ."

ಮಾಣಿಕ ಅಂದಳು "ತಾತ ಹುಟ್ಟಿದ ದಿವಸ ನನಗೆ ಕೊಟ್ಟ ಕಾಣಿಕೆಯಾದ ಈ ರೇಶಮಿ ಪತ್ತಲ ನಾನು ನನ್ನ ಗೆಳತಿಗೆ ಕಾಣಿಕೆಯೆಂದು ಕಳಿಸುತ್ತೇನೆ. ದೇವರು ನನ್ನ ಕಾಣಿಕೆಯನ್ನೇ ಮೆಚ್ಚುವನು."

ರೂಪಾ ಅಂದಳು "ಇಂದಾಪೂರದಲ್ಲಿರುವ ನನ್ನ ಗೆಳತಿಗೆ ನನಗೆ ಪ್ರಾಣದಂತಿರುವ ನನ್ನ ಗೊಂಬೆಯನ್ನು ನಾನು ಕಳಿಸುತ್ತೇನೆ. ಆ ಗೊಂಬೆಗೆ ನಾನು ಎಷ್ಟು ಆಭರಣ ಹಾಕಿದ್ದೇನೆ! ಇಂಥ ಗೊಂಬೆಯನ್ನು ನಾನು ಇಂದು ಕಳುಹಿಸುತ್ತಿದ್ದೇನೆ."

ಸಖೂ ಎಲ್ಲರಿಗೂ ನೆರವಾಗುತ್ತಿದ್ದಳು. ಆದರೆ ಇವುಗಳನ್ನು ಕಳಿಸುವ ಪ್ರಯೋಜನ ಅವಳಿಗೆ ತಿಳಿಯಲೊಲ್ಲದು. ಅವಳು ಎಲ್ಲರನ್ನು ಕೇಳಿದಳು. ಹೀರಾ "ಇನ್ನು ಎರಡು ದಿವಸಗಳ ಮೇಲೆ ದೀಪಾವಳಿ. ದೀಪಾವಳಿ ದಿನ ಸಗ್ಗದ ಪೂಮಾಲೆ ಭೂಮಿಯ ಮೇಲೆ ಬರುವದು. ದೇವರು ಮೆಚ್ಚಿದ ಕಾಣಿಕೆಯನ್ನು ಕೊಟ್ಟವರ ಕೊರಳಲ್ಲಿ ಅದು ಬೀಳುವದು. ಊರಲ್ಲೆಲ್ಲ ಜನ ಇದನ್ನೇ ಆಡುತ್ತಾರೆ. ಈಗ ಹನ್ನೆರಡು ವರುಷ ಈ ಮಾಲೆ ಬಂದಿಲ್ಲ. ಈ ವರುಷ ಬರುತ್ತದೆ ಎಂಬ ವಾರ್ತೆಯಿದೆ. ಆದ್ದರಿಂದ ಊರೊಳಗಿನವರೆಲ್ಲರು ಸಣ್ಣ-ಪುಟ್ಟ ಕಾಣಿಕೆ ಕೊಡುವದರಲ್ಲಿ ಮಗ್ನರಾಗಿದ್ದಾರೆ." ಎಂದು, ಪುನಃ ಹೀರಾ ನಕ್ಕು ಕೇಳಿದಳು "ಸಖೂ, ನೀನು ಯಾವ ಕಾಣಿಕೆ ಕೊಡುವಿ ?"

ಸಖೂ ಅಂದಳು "ನಾನು ಯಾವ ಕಾಣಿಕೆ ಕೊಡಲಿ ? ನನ್ನ ಹತ್ತರ ಪುಸ್ತಕವೂ ಇಲ್ಲ, ರೇಶ್ಮೆಯ ಪತ್ತಲವೂ ಇಲ್ಲ, ಗೊಂಬೆಯೂ ಇಲ್ಲ. ನನ್ನ ತಾಯಿ ಬಡವಿ. ನಾವು ಕೊಡುವದಾದರೂ ಏನು ? ನಿಮ್ಮ ಕೊರಳಲ್ಲಿ ಮಾಲೆ ಬಿದ್ದರೆ ನನಗೆ ಆನಂದ. ನಾನು ಕೆಲಸ ಮಾಡುವವರ ಮನೆಯಲ್ಲಿ

ಒಬ್ಬರ ಕೊರಳಲ್ಲಿ ಮಾಲೆ ಬಿದ್ದಿದೆ ಅಂದರೆ ಅದು ನನಗೆ ಮಹದ್ಭಾಗ್ಯವೇ ಸರಿ. ಇಂಥ ಪುಣ್ಯವಂತರ ಮನೆಯಲ್ಲಿ ನಾನು ಕೆಲಸ ಮಾಡುತ್ತೇನೆ ಅನ್ನುವದೇ ಆನಂದ ನನಗೆ. ಮತ್ತಿಷ್ಟು ಹುಮ್ಮಸಿನಿಂದ ಕೆಲಸ ಮಾಡುವೆ. ನಿಮ್ಮ ಕೆಲಸ ಸರಿಯಾಯಿತೆ ?"

"ಸಖೂ ಎಷ್ಟು ಚನ್ನಾಗಿ ಕಟ್ಟುತ್ತಾಳೆ; ನಮಗೆ ಹೀಗೆ ಕೆಲಸ ಮಾಡಲು ಬರುವದಿಲ್ಲ" ಎಂದು ರೂಪಾ ಅಂದಳು.

ಮಾಣಿಕ ಅಂದಳು "ನೋಡಿದರೆ ಇವಳು ಸಾಲೆಗೆ ಸಹ ಹೋಗುವದಿಲ್ಲ."

ಆಮೋದ ಊರಲ್ಲಿ ಕಾಣಿಕೆ ಕೊಡುವ ಒಂದು ಚಳವಳಿಯೇ ಎದ್ದಿತ್ತು. ಸಂದೇಹರಾಯರೂ ನಾಸ್ತಿಕರೂ ಸಹ ಕೊಡತೊಡಗಿದರು ! ಶೆಟ್ಟಿ ಸಾಹುಕಾರರು ಮುಂದರಿದರು. ಒಬ್ಬ ಧರ್ಮಸಾಲೆ ಕಟ್ಟಿಸಿದ. ಇನ್ನೊಬ್ಬ ಭಾವಿ ಕಡಿಸಿ, ಕಟ್ಟಿಸಿ ತನ್ನ ಹೆಸರನ್ನು ಕಲ್ಲಿನಲ್ಲಿ ಕೆತ್ತಿಸಿದ; ಈ ರೀತಿ ತಮಗೆ ತೋಚಿದ ರೀತಿಯಲ್ಲಿ ಕಾಣಿಕೆಯ ಹಬ್ಬದಲ್ಲಿ ಎಲ್ಲರೂ ಭಾಗ ವಹಿಸಿದ್ದರು.

ದೀಪಾವಳಿ ಬಂದಿತು. ಬೆಳಗಾಗುವದರೊಳಗಾಗಿ ಮಂಗಳಸ್ನಾನ ಮಾಡುವದಿತ್ತು. ಇಂದು ರಾತ್ರಿ ಸಗ್ಗದ ಪೂಮಾಲೆ ಬರುವದಿತ್ತು ! ಊರಲ್ಲೆಲ್ಲ ಕುತೂಹಲ, ಉತ್ಸಾಹ ಕಂಡುಬರುತ್ತಿದ್ದವು. ಎಲ್ಲರ ಬಾಯಲ್ಲಿ ಅದೇ ವಿಷಯ "ಮಾಲೆ ಬರುವದು; ಆದರೆ ಅದು ಯಾರ ಕೊರಳಲ್ಲಿ ಬೀಳುವದೋ ಏನೋ !"

ಸಾಯಂಕಾಲವಾಗುತ್ತ ಬಂದಿತು. ಈ ಮೂರು ಹುಡುಗೆಯರ ತಂದೆ-ತಾಯಿ ಇಬ್ಬರು ಒಂದು ಚಕ್ಕಡಿಯಲ್ಲಿ ಕುಳಿತು ಹೊರಗೆ ಹೋದರು. ಮೂವರು ಹುಡುಗೆಯರು ಮನೆಯಲ್ಲಿದ್ದರು. ಅಂಗಳದಲ್ಲಿ ರಂಗವಲ್ಲಿ ಹಾಕಿದರು. ಸಖೂ ಅವರಿಗೆ ನೆರವಾಗುತ್ತಿದ್ದಳು. ಮಣ್ಣಿನ ಪ್ರಣತಿಗಳನ್ನು ತಯಾರಿಸಿ, ಅವುಗಳಲ್ಲಿ ಎಣ್ಣೆ ಬತ್ತಿ ಹಾಕಿದಳು.

ದೀಪ ಹಚ್ಚುವ ವೇಳೆ ಆಯಿತು. ಅಕಸ್ಮಾತ್ತಾಗಿ ಒಂದು ಚಮತ್ಕಾರ ಸಂಭವಿಸಿತು. ಮುಗಿಲು ಕಾರ್ಮೋಡಗಳಿಂದ ತುಂಬಿತು. ಬಿರುಗಾಳಿ ಬೀಸತೊಡಗಿತು. ಮಳೆ ಸುರಿಯತೊಡಗಿತು. ಎಲ್ಲ ಕಡೆಯಲ್ಲಿ ನೀರೇನೀರಾಗಿ ಹೋಯಿತು. ಮಿಂಚು ಗುಡುಗು ಇದ್ದವು. ಮಳೆಗಾಲದಲ್ಲಿ ಸಹ ಇಷ್ಟು ಮಳೆ ಬೀಳಲಿಲ್ಲ. ಅಲ್ಲಲ್ಲಿ ನೀರಿನ ಪ್ರವಾಹ ಹರಿಯುತ್ತಿತ್ತು. ಒಮ್ಮೆಲೆ ಕಡ ಕಡಕಟ ಎಂಬ ಸಪ್ಪಳ ! ಎಲ್ಲಿಯಾದರೂ ಸಿಡಿಲು ಬಿದ್ದಿರಬೇಕು. ಈ ಹುಡುಗೆಯರ ಎದೆ ಧಸಲ್ ಅಂದಿತು. ಅವರ ತಾಯಿ ತಂದೆ ಇಬ್ಬರು ಹೊರಗೆ ಹೋಗಿದ್ದರು. ಅವರು ಬಿರುಗಾಳಿಯಲ್ಲಿ ಸಿಕ್ಕಿರಬೇಕು !!

ಊರಲ್ಲಿ ಕತ್ತಲೆ ಕವಿದಿತ್ತು. ದೀಪಾವಳಿಯ ದಿವಸ. ಆದರೆ ಒಂದೂ ದೀಪ ಇಲ್ಲ. ಗಾಳಿಯಿಂದ ಎಲ್ಲ ದೀಪಗಳು ಆರಿ ಹೋಗಿದ್ದವು. ಸುಖದ ಮಾಲೆ, ಸಗ್ಗದ ಮಾಲೆ ಬರುವದಂತೂ ದೂರವೇ ಉಳಿಯಿತು ! ಪ್ರಳಯಕಾಲದ ರಾತ್ರಿ ಬಂದಂತೆ ಎಲ್ಲರಿಗೂ ಅನಿಸಿತು; ವೇತ್ರವತಿಯ ನೀರು ಏರಲಾರಂಭಿಸಿತು. ಘೋ, ಘೋ ಶಬ್ದ ಕೇಳಿಸುತ್ತಿತ್ತು. ಊರು ತೇಲಿ ಹೋಗುತ್ತದೆಯೋ ಏನೋ ಎಂದು ಅನಿಸುತ್ತಿತ್ತು. ಈ ಊರ ಪಾಪಗಳು ಇಷ್ಟು ಆದವೇ? ದೇವರಿಗೂ ಬೇಡಾಯಿತೇನು ಈ ಊರು ? ಸಗ್ಗದ ಪೂಮಾಲೆ ಬರುವದರ ಪೂರ್ವಸಿದ್ಧತೆ ಎಂದು ಊರನ್ನು ಝುಳಝುಳ ತೊಳಲು ವರುಣ ದೇವ ಇದನ್ನು ತೊಳೆದನೇ ?

ಮಾಣಿಕ ಅಂದಳು "ದೀಪಾವಳಿ, ಇಂದು ಸಾವಿರಾರು ದೀಪ ಬೆಳಗಬೇಕು. ಆದರೆ ಇವೊತ್ತು ಎಲ್ಲ ಕಡೆಯುಲ್ಲಿ ಕಗ್ಗತ್ತಲೆಯಾಗಿದೆ"

ಹೀರಾ ಅಂದಳು "ಇಂದು ದೀಪಾವಳಿ. ಆದರೆ ಹೊರಗೆ ಒಂದು ಸಣ್ಣ ದೀಪ ಸಹ ಇಲ್ಲವಲ್ಲ !"

ರೂಪಾ ಅಂದಳು "ಹೊರಗೆ ದೀಪ ಉಳಿಯುವಂತೆ ಮಾಡುವ ಒಂದು ಯುಕ್ತಿ ಇಲ್ಲವೇ ಸಖೀ ?"

"ನಮ್ಮ ಮನೆಯಲ್ಲಿಯ ಕಂದೀಲುಗಳನ್ನೆಲ್ಲ ಹಚ್ಚಿ ಹೊರಗೆ ತೂಗ ಹಾಕೋಣ ಮತ್ತು ಮನೆಯೊಳಗೆ ಪ್ರಣತಿ ಹಚ್ಚೋಣ; ಅಂದರೆ ಒಳಗೂ ಹೊರಗೂ ಬೆಳಕಾಗುವದು" ಎಂದು ಸಖೂ ಹೇಳಿದಳು.

"ನಿನಗೆ ಇಂಥ ಯುಕ್ತಿ ಹೇಗೆ ಹೊಳೆಯುತ್ತವೆ! ನಾವು ಸಾಲೆಗೆ ಹೋಗುತ್ತೇವೆ, ಆದರೆ ನಮ್ಮ ತಲೆಯಲ್ಲಿ ಬರುವದಿಲ್ಲ, ತಲೆಯಲ್ಲಿ ಬೆಳಕಿಲ್ಲವೆಂದ ಮೇಲೆ ಹೊರಬೀಳುವುದಾದರೂ ಹೇಗೆ?" ಅಂದಳು ಮಾಣಿಕ.

ಸಖೂ ಹೇಳಿದಂತೆ ಮಾಡಲಾಗಿ ಹೊರಗೆ ಸ್ವಲ್ಪಾದರೂ ಬೆಳಕು ಬಿದ್ದಿತು. ಮುಗಿಲಿನಲ್ಲಿ ಮಿಂಚಿತು. ಈ ಮಿಣಿ ಮಿಣಿ ದೀಪ ನೋಡಿ ಉಪಹಾಸ ಮಾಡಿದಂತೆ ತೋರಿತು! ಮುಗಿಲಿನಲ್ಲಿಯ ಚಂಚಲೆ! ನಗು ನಗು. ನಿನ್ನ ಬೆಳಕು ಎಷ್ಟಿದ್ದರೂ ಅದರ ಉಪಯೋಗವೇನು? ಕಣ್ಣು ಕುಕ್ಕುತ್ತವೆ ಇಷ್ಟೇ? ಈ ಕಂದೀಲುಗಳ ಪ್ರಕಾಶ ಸೌಮ್ಯವಿದ್ದರೂ ಮುಂದಿನ ಹಾದಿ ತೋರುತ್ತದೆ. ಹೆಜ್ಜೆ ಎಲ್ಲಿಡಬೇಕೆಂಬುದು ತಿಳಿಯುತ್ತದೆ.

ಮಳೆಗರೆಯುತ್ತಿತ್ತು. ಈ ಹುಡುಗಿಯರ ತಂದೆತಾಯಿ ಇನ್ನೂ ಬರಲಿಲ್ಲ. ಅವರಿಗೆ ಹೊಟ್ಟೆ ಹಸಿದಿತ್ತು. ರೂಪಾ ಅಂದಳು "ಸಖೂ, ಅವ್ವ ಅಪ್ಪ ಯಾವಾಗ ಬರುವರು? ನನಗಂತೂ ಬಹಳ ಹಸಿವೆಯಾಗಿದೆ. ನೀನು ನಮಗೆ ಬಡಿಸುತ್ತೀಯಾ?" ಹೀರಾ, ಮಾಣಿಕ ಇಬ್ಬರೂ ಒಪ್ಪಿದರು. ಸಖೂ ಮೂರು ಬಾಳೆ ಎಲೆಗಳನ್ನು ಇಟ್ಟಳು. ರಂಗವಲ್ಲಿ ಹಾಕಿದಳು. ಕರಜಿಕಾಯಿ, ಉಂಡಿ, ಚಕ್ಕಲಿಗಳನ್ನು ಅವರಿಗೆ ಬಡಿಸಿದಳು. ಅವರು ಮೂವರೂ ತಿನ್ನತೊಡಗಿದರು. ತಿನ್ನುತ್ತ, ತಿನ್ನುತ್ತ ರೂಪಾ ಅಂದಳು. "ಯಾವಾಗ ಮಳೆ ನಿಲ್ಲುತ್ತದೆಯೋ ಏನೋ? ಇನ್ನೂ ಅವ್ವ ಬರಲಿಲ್ಲವಲ್ಲ?"

ಹೀರಾ ಅಂದಳು "ಈಗ ನಿಲ್ಲುವದು, ಬಹಳವಾಗಿ ಅಪ್ಪ ಅವ್ವ ಇಬ್ಬರೂ ಊರ ಹೊರಗಿನ ಗುಡಿಯಲ್ಲಿ ಕೂತಿರಬೇಕು."

ಮಾಣಿಕ ಅಂದಳು "ದೇವರು ಇಬ್ಬರನ್ನೂ ಸುಖರೂಪ ನಮ್ಮ ಮನೆಗೆ ಮುಟ್ಟಿಸಲಿ. ತೊಯಿಸಿಕೊಂಡಿರಬೇಕು. ಅವರಿಬ್ಬರೂ ಮನಸಿನಲ್ಲಿ ಅನ್ನುತ್ತಿರಬೇಕು "ಮನೆಯಲ್ಲಿ ಹುಡುಗಿಯರು ಉಪವಾಸ ಇರಬೇಕು ! ಆದರೆ ನಾವಂತೂ ಅವರನ್ನು ಬಿಟ್ಟೇ ತಿನ್ನಲಿಕ್ಕೆ ಕೂತಿದ್ದೇವೆ."

ಅಷ್ಟರಲ್ಲಿ ಬಾಗಿಲ ಹತ್ತರ ಟಕ್, ಟಕ್, ಟಕ್ ಎಂಬ ಸಪ್ಪಳ ವಾಯಿತು. ಯಾರಾದರೂ ಬಂದಿರಬೇಕು.

ರೂಪಾ ಅಂದಳು "ನೋಡು ಸಖೂ, ಅಪ್ಪ ಬಂದಿರಬೇಕು. ಹೀರಾ ಅಂದಳು "ಮಳೆಯೊಳಗೆ ಬಂದರಲ್ಲ ಓಡು ಸಖೂ." ಮಾಣಿಕ ಅಂದಳು "ನಾವು ತಿನ್ನುವದನ್ನು ಸ್ವಲ್ಪ ಹೊತ್ತು ನಿಲ್ಲಿಸುವ." ಸಖೂ ಅವಸರದಿಂದ ಬಾಗಿಲ ತೆರೆದಳು. ಅಲ್ಲಿ ಬಂದವರು ಯಾರು ? ಜಮೀನದಾರ ನಾಗಲಿ ಆಥವಾ ಅವನ ಹೆಂಡತಿಯಾಗಲಿ ಬಂದಿದ್ದಿಲ್ಲ. ಹಾಗಾದರೆ ಬಾಗಿಲ ಬಡಿದವರಾರು? ಅಲ್ಲಿ ಒಬ್ಬ ಚಿಕ್ಕ ಬಾಲಿಕನಿದ್ದ. ಕಂದೀಲದ ಮಂದ ಬೆಳಕಿನಲ್ಲಿ ಅವನ ಕರುಣ ಮುಖ ತೋರುತ್ತಿತ್ತು "ಯಾರು ನೀನು ಕಂದಾ ?" ಎಂದು ಸಖೂ ಮಂಜುಳ ಧ್ವನಿಯಲ್ಲಿ ಅವನನ್ನು ಕೇಳಿದಳು.

"ನಾನೊಬ್ಬ ಅನಾಥ ಹುಡುಗ. ನನಗೆ ಅಕ್ಕತಂಗಿಯರಿಲ್ಲ, ಅಣ್ಣ ತಮ್ಮಂದಿರಿಲ್ಲ. ತಾಯಿತುಂದೆ, ಯಾರೂ ಇಲ್ಲ ಈ ಜಗತ್ತಿನಲ್ಲಿ ನಾನೊಬ್ಬನೆ ಇದ್ದೇನೆ. ಹೀಗೆ ಅತ್ತಿತ್ತ ಸಂಚಾರ ಮಾಡುತ್ತ ಈ ಆಮೋದ ಊರಿಗೆ ದೀಪಾವಳಿಗೆ ಎಂದು ಬಂದೆ—ಜನ ಕಾಣಿಕೆ ಕೊಡುತ್ತಾರೆ ಎಂದು ಕೇಳಿ. ನನಗೂ ಏನಾದರೂ ಸಿಗಬಹುದು ಎಂಬ ಆಸೆ. ಆದರೆ ಉಪವಾಸ ಇದ್ದೇನೆ. ಊರು ಮುಟ್ಟುವದರೊಳಗಾಗಿ ಮಳೆ ಜಡಿಯತೊಡಗಿತು. ಹಾದಿ ಸಿಕ್ಕಲೊಲ್ಲದು. ಕಾಲಿಗೆಲ್ಲ ಮುಳ್ಳು ಚುಚ್ಚಿವೆ. ಅಲ್ಲಲ್ಲಿ ಕಲ್ಲು ಎಡವಿ ಗಾಯಗಳಾಗಿವೆ. ಪೂರ್ಣ ತೊಯ್ದು ಬಿಟ್ಟಿದ್ದೇನೆ. ಹೊಟ್ಟೆಯಲ್ಲಿ ಏನೂ ಇಲ್ಲ. ಇನ್ನು ಒಂದು ಹೆಜ್ಜೆ ಮುಂದೆ ಇಡುವಷ್ಟು ತ್ರಾಣ ಸಹ ಇಲ್ಲ ಮೈಯಲ್ಲಿ. ನನಗೆ ನಿಮ್ಮ ತಮ್ಮನೆಂದು ತಿಳಿದು ಒಳಗೆ ಬರಗೊಡುತ್ತೀರಾ ?

ಬಡವನ ಮೇಲೆ ಸ್ವಲ್ಪ ಕರುಣೆ ತೋರುತ್ತೀರಾ ?'' ಎಂದು ಒಳ್ಳೆ ಕಕ್ಕುಲತೆಯಿಂದ ಆ ಬಾಲಕ ಕೇಳಿದ.

ಸಖೂನ ಕರುಳು ಕರುಗಿತು; '' ಬಾ ಒಳಗೆ ಬಾ, '' ಅಂದಳು. ಅವನ ಕೈ ಹಿಡಿದು ಅವನನ್ನು ಒಳಗೆ ಕರೆದುಕೊಂಡು ಬಂದಳು. ತಮ್ಮ ತಂದೆ ಅಲ್ಲ, ಆದರೆ ಯಾವನೊ ಒಬ್ಬ ತಿರುಕ ಹುಡುಗನನ್ನು ಸಖೂ ಕರೆದುಕೊಂಡು ಬಂದುದ ನೋಡಿ, ಆ ಮೂವರು ಹುಡುಗಿಯರು ಒಬ್ಬೊಬ್ಬರಾಗಿ ಒಂದೊಂದು ಮಾತು ಅಂದರು. ಮಾಣಿಕ ಅಂದಳು " ಸಖೂ, ಯಾರ ಹುಡುಗ ಇವ ? ಯಾವನಾದರೂ ಕಳ್ಳ ಇರಬಹುದು ! ಇಂಥವನನ್ನು ಮನೆಯಲ್ಲಿ ಕರೆಯುವದೆ? "

ಹೀರಾ ಅಂದಳು '' ದರಿದ್ರನೆಂದು ಕಾಣುತ್ತದೆ. ಮೈಮೇಲೆ ಒಂದು ಚಿಂದಿ ಸಹ ಇಲ್ಲ; ಕಾಲು ಕೆಸರು ಮುಳುಗಿವೆ. ಎಂಥ ಹೊಲಸು ಕಾಲು ಮಾಡಿಕೊಂಡು ಬಂದಿದ್ದಾನಿವ ! ''

ರೂಪಾ ಅಂದಳು ''ಹೋಗೋ ದರಿದ್ರಾ ! ನಾಚಿಕೆ ಬರುವದಿಲ್ಲವೆ ನಿನಗೆ ಇಲ್ಲಿ ಬರಲಿಕ್ಕೆ ? ''

ಸಖೂ ಅಂದಳು ''ಇವರಾರ ಮಾತು ಕೇಳಬೇಡ ಬಾ. ನಾನು ನಿನಗೆ ಬಿಸಿನೀರು ಕೊಡುತ್ತೇನೆ. ಎಣ್ಣೆ ಹಚ್ಚುತ್ತೇನೆ. ಇಂದು ದೀಪಾವಳಿ. ದೇವರೇ ನನಗೆ ತಮ್ಮನನ್ನು ಕೊಟ್ಟಂತೆ ಆಗಿದೆ. ಆ ಮೇಲೆ ನಿನಗೆ ಫಲಾಹಾರ ಕೊಡುತ್ತೇನೆ. "

ಹೀಗೆಂದು ಸಖೂ ಆ ಹುಡುಗನನ್ನು ಎರೆದಳು. ಆಮೇಲೆ ಮಣೆ ಹಾಕಿ, ರಂಗವಲ್ಲಿ ಹಾಕಿ ಅವನಿಗೆ ಫಲಾಹಾರಕ್ಕೆ ಕೂಡಿಸಿದಳು.

ಮಾಣಿಕ ಅಂದಳು '' ಏನಿದು ಸಖೂ ! ನಮ್ಮ ಮನೆ ಪಾವನ ಮಾಡಿದಿ ಅವ್ವಾ ಇಂಥ ದರಿದ್ರನನ್ನು ಅಡಗಿ ಮನೆಯಲ್ಲಿ ತಂದು ! "

ಹೀರಾ ಅಂದಳು " ಸಖೂ ! ನೀನು ಸೊಕ್ಕಿದಿ . ನಮ್ಮ ಮಾತಿನ ಕಡೆಗೆ ಲಕ್ಷಕೊಡಬೇಡ ಅಂತ ಹೇಳುತ್ತಿದ್ದೀ! ಬರಲಿ ಈಗ ಅವ್ವ, ಎಲ್ಲಾ ನಿನ್ನ ಬಗ್ಗೆ ಹೇಳುತ್ತೇನೆ. "

ರೂಪಾ ಅಂದಳು "ಏನಿದು ! ಎಲೆ ತುಂಬ ಬಡಿಸಿದೆಯಲ್ಲ ಆ ದರಿದ್ರನಿಗೆ! ಕಡಿಮೆ ಹೂರಣ ಹಾಕಿದ್ದವು ಮಂದಿಗೆ ಕೊಡಲಿಕ್ಕೆ ಮಾಡಿದ ಕರಿಚಿಕಾಯಿ, ಅವನ್ನು ಅವನಿಗೆ ಬಡಿಸಬಾರದಿತ್ತು."

ಸಖೂ ಅಂದಳು "ನನ್ನ ಪಾಲಿನವು ನಾನು ಅವನಿಗೆ ಬಡಿಸಿದೆ. ಬೇಕಾದರೆ ಇವತ್ತು ನಿಮ್ಮಲ್ಲಿ ತಿನ್ನುವದಿಲ್ಲ, ಊಟಾನೂ ಮಾಡುವದಿಲ್ಲ."

ರೂಪಾ ಸಿಟ್ಟಿಗೆದ್ದು ಅಂದಳು "ಅಯ್ಯೋ ಅವ್ವ! ನಮ್ಮನ್ನು ನಾಚಿಗೆ-ಗೇಡಿ ಮಾಡಬೇಕೆಂದು ಹೀಗೆ ಮಾಡುತ್ತೀಯೇನು ಸಖೂ? ತನ್ನ ಪಾಲು ಕೊಡುತ್ತಾಳಂತೆ!"

ಸಖೂ ಆ ಹುಡುಗನಿಗೆ ಅಂದಳು "ನೀನು ಹೊಟ್ಟೆ ತುಂಬ ತಿನ್ನಪ್ಪಾ. ನಿನಗೆ ನಮ್ಮ ತಾಯಿಯ ಮನೆಗೆ ಮಲಗಲಿಕ್ಕೆ ಕಳುಹಿಸುತ್ತೇನೆ."

ಮಾಣಿಕ ಆ ಹುಡುಗನನ್ನು ಕೇಳಿದಳು "ಯಾವ ಊರವನೋ ನೀನು?" ಎಂದು. "ನನ್ನೂರು ಆನಂದಪುರ" ಅಂದ ಆ ಹುಡುಗ. "ಓಹೋ ಹಾಗಾದರೆ ಆ ಆನಂದಪುರ ಬಿಟ್ಟು ಈ ದುಃಖದಲ್ಲಿ ಯಾತಕ್ಕೆ ಬಂದೆಯೊ ಅಪ್ಪಾ" ಎಂದು ಮಾಣಿಕ ಉಪಹಾಸಿಕ ಸ್ವರದಿಂದ ಕೇಳಿದಳು.

"ನನ್ನಂಥ ಇನ್ನೊಂದು ಊರು ಜಗತ್ತಿನಲ್ಲಿ ಅದೆಯೋ ಏನೋ ಎಂದು ನೋಡಲು ಬಂದೆ" ಅಂದನವ. "ಏನಿದೆ ನಿಮ್ಮ ಊರಲ್ಲಿ" ಎಂದು ರೂಪಾ ಕೇಳಿದಳು. "ನಮ್ಮ ಊರಲ್ಲಿ ಬಡಿದಾಟಗಳಿಲ್ಲ. ಯಾರು ಯಾರನ್ನು ಜರಿಯುವದಿಲ್ಲ, ದ್ವೇಷಿಸುವದಿಲ್ಲ; ಕೀಳು ಮೇಲು ಎಂಬ ಭಾವನೆಗಳಿಲ್ಲ. ಎಲ್ಲರೂ ತಮ್ಮ ತಮ್ಮ ಕೆಲಸ ಮಾಡುತ್ತಾರೆ, ಪರಸ್ಪರರಿಗೆ ಸಹಕಾರ ನೀಡುತ್ತಾರೆ. ನಮ್ಮೂರ ಜನರ ಮನಸಿನಲ್ಲಿ ಪ್ರೇಮವು ತುಂಬಿ ತುಳುಕುತ್ತಿದೆ. ನದಿ, ಭಾವಿ ನೀರಿನಿಂದ ಯಾವಾಗಲೂ ತುಂಬಿರುತ್ತವೆ. ಗಿಡಗಳು ಹಣ್ಣಿನಿಂದ ಬಾಗಿರುತ್ತವೆ. ಹೊಲದಲ್ಲಿ ಬೆಳೆ ತುಂಬಿರುತ್ತದೆ. ನನ್ನೂರಲ್ಲಿ ರೋಗಗಳಿಲ್ಲ, ಬರವಿಲ್ಲ, ಬಡತನವಿಲ್ಲ, ದಾಸ್ಯವಿಲ್ಲ." ಎಂದು ಆ ಬಾಲಕ ಹೇಳಿದ.

"ಮತ್ತಾವ ಇಂಥ ಊರು ನೀನು ನೋಡಿದ್ದೀ?" ಎಂದು ಮಾಣಿಕ ಕೇಳಿದಳು. "ಇಲ್ಲ, ಇನ್ನೂ ಇಲ್ಲ!" ಅಂದನವ. "ಕಾಣಲಿಕ್ಕೆ ದರಿದ್ರನಂತಿದ್ದಾನೆ, ಆದರೆ ಮಾತ್ರ ಒಳ್ಳೇ ಚನ್ನಾಗಿ ಮಾತಾಡುತ್ತಾನೆ ಇವ."ಅಂದಳು ಹೀರಾ.

ಸಖೂ ಅಂದಳು "ನಡೆ ನಮ್ಮ ಮನೆ ತೋರಿಸುತ್ತೀನೆ. ನಾಳೆ ನಿನ್ನ ಕಾಲಿನೊಳಗಿನ ಮುಳ್ಳು ತೆಗೆಯುತ್ತೀನೆ. ಈಗ ಮಲಗು ಅಲ್ಲಿ, ನಡೆ."

ಸಖೂ ಆ ಹುಡುಗನ ಕೈ ಹಿಡಿದುಕೊಂಡು ನಡೆದಳು. ಮಳೆ ನಿಂತಿತ್ತು. ಮುಗಿಲು ನಿಚ್ಚಳವಾಗಿತ್ತು. ಲಕ್ಷಾವಧಿ ತಾರೆಗಳು ಬೆಳಗುಗುತ್ತಿದ್ದವು. ಮನೆ ಮನೆಯಲ್ಲಿ ಪ್ರಣತಿಗಳು ಬೆಳಗುತ್ತಿದ್ದವು. ಬಾನಿನಲ್ಲಿ ತಾರೆಗಳ ಕೆಳಗೆ ಸಾವಿರಾರು ದೀವಿಗೆ. ದೀಪಾವಳಿ ಇದೆ ಇಂದು ಎಂದೆನಿಸ ತೊಡಗಿತು.

ಹೀರಾ, ಮಾಣಿಕ, ರೂಪಾ ಹೊರಗೆ ಬಂದು ಪ್ರಣತಿಗಳನ್ನು ಹಚ್ಚಿದರು. ಆ ಜ್ಯೋತಿಗಳು ಹೇಗೆ ಕಾಣಿಸುತ್ತಿದ್ದವು? ಶಾಂತ, ಶೀತಲ ಮತ್ತು ಸೌಮ್ಯ ಕಾಣುತ್ತಿದ್ದವು.

ಹೀರಾ ಅಂದಳು "ಈ ಜ್ಯೋತಿಗಳು ವಜ್ರದಂತೆ ಮಿರುಗುತ್ತವೆ."
ಮಾಣಿಕ ಅಂದಳು "ಮುತ್ತು ಮಾಣಿಕಗಳಂತೆ ಥಳಥಳಿಸುತ್ತವೆ"
ರೂಪಾ ಅಂದಳು "ಬೆಳ್ಳಿ ಬಂಗಾರದಂತೆ ಹೊಳೆಯುತ್ತವೆ."

ಇವರ ತಂದೆ ತಾಯಿ ಮನೆಗೆ ಬರಲು ಹೊರಟರು. ಚಕ್ಕಡಿ ಬರುತ್ತಿತ್ತು, ಅಷ್ಟರಲ್ಲಿ ಊರ ಜನರೆಲ್ಲರು "ಬಂದಿತು, ಸಗ್ಗದ ಮಾಲೆ ಬಂದಿತು, ಪರಿಮಳವು ಎಲ್ಲ ಕಡೆಗೂ ಹರಡಿದೆ ಅತ್ತಿಂದ ಬರುತ್ತದೆ ಪರಿಮಳ, ನಡೆಯಿರಿ." ಹೀಗೆ ಅನ್ನುತ್ತ ಅತ್ತಿತ್ತ ಸುಳಿದಾಡತೊಡಗಿದರು. ಹೀಗೆ ಸುಳಿದಾಡುತ್ತ ಜಮೀನದಾರರ ಮನೆಯ ಹತ್ತಿರ ಬಂದರು. ಜಮೀನದಾರರ ಚಕ್ಕಡಿ ಆ ಜನಸಂದಣಿಯೊಳಗಿಂದ ಹೇಗಾದರೂ ಮಾಗಿ ಮನೆಯ ಬಾಗಿಲ ಹತ್ತಿರ ಬಂದಿತು. ಜಮೀನದಾರನು ಕೆಳಗೆ ಇಳಿದು ಅಲ್ಲೆ ಬಾಗಿಲ

ಹತ್ತಿರ ನಿಂತನು. ಅವನ ಮೂವರು ಹೆಣ್ಣುಮಕ್ಕಳು "ಅಪ್ಪ ಬಂದ" ಎಂದು ಓಡಿ ಬಂದು ಅವನಿದ್ದಲ್ಲಿ ಬಂದು ನಿಂತರು. ಮನೆಯ ಎದುರು ಜನಜಾತ್ರೆ. ಸುವಾಸನೆ ಎಲ್ಲ ಕಡೆ ಹರಡಿತ್ತು. ಆದರೆ "ಮಾಲೆ ಎಲ್ಲಿ? ಮಾಲೆ ಎಲ್ಲಿ?" ಎಂದು ಎಲ್ಲರೂ ಒಂದೇ ಕೂಗು ಎಬ್ಬಿಸಿದ್ದರು. ಏನು ಈ ಸುಗಂಧದ ಮಾಲೆ ಮುಗಿಲಿನಿಂದ ಹೊರಟಿದೆ ಎಂದು ಹೇಳಲು ಮುಂದೆ ಬಂದಿದ್ದಾರೆಯೆ!

ಸಖೂ ಆ ಹುಡುಗನನ್ನು ಮನೆಗೆ ಮುಟ್ಟಿಸಿ ಮಲಗಿಸಿ ಬರುತ್ತಿದ್ದಳು. ತನ್ನ ಯಜಮಾನನ ಮನೆಯ ಮುಂದೆ ನೆರೆದ ಜನಸಂದಣಿ ನೋಡಿದಳು. ಹೇಗಾದರೂ ಮಾಡಿ ಆ ಮನೆಯ ಕಟ್ಟೆಯನ್ನು ಹತ್ತಿದಳು. ಇಷ್ಟರಲ್ಲಿ ಮೂವರು ಹುಡುಗಿಯರೂ ಆಶ್ಚರ್ಯದಿಂದ ಚೀರಿದರು, "ಸಖೂ, ಸಖೂ, ನಿನ್ನ ಕೊರಳಲ್ಲಿ ಸಗ್ಗದ ಪೂಮಾಲೆ! ನೋಡು ನೋಡು ಅದನ್ನು! ಅದರದೇ ಸುಗಂಧ ಎಲ್ಲ ಕಡೆಗೆ ಹರಡಿದೆ."

ಸಖೂನ ಕೊರಳಲ್ಲಿ ಸಗ್ಗದ ಪೂಮಾಲೆ!!

ಜನ ಚೀರಿದರು —"ಒಬ್ಬ ಒಕ್ಕಲಗಿತ್ತಿಯ ಹುಡುಗಿಯ ಕೊರಳಲ್ಲಿ ಸಗ್ಗದ ಪೂಮಾಲೆಯೇ? ಇದು ನಮ್ಮೂರಿನ ಅಪಮಾನ."

ನೇಮಚಂದ ಶೆಟ್ಟಿ ಅಂದನು "ನಾನು ಆ ಸಾಲೆಗೆ ಒಂದು ಲಕ್ಷ ರೂಪಾಯಿ ಕೊಟ್ಟೆ! ನನಗೆ ಮಾಲೆ ಇಲ್ಲವೆ? ದೇವರು ಅನ್ಯಾಯಿ ಇದ್ದಾನೆ!"

ಶಿವಶೆಟ್ಟರೆಂದರು "ಭಾವಿ ಕಡಿಸಿ ನನ್ನ ಹೆಸರು ಕೆತ್ತಿಸಿದೆ. ನನಗೆ ಮಾಲೆ ಇಲ್ಲ. ಎಂಥ ಅನ್ಯಾಯ!"

ಸಖೂ ಅಂದಳು "ಏನೊ ತಪ್ಪು ಆದಂತೆ ತೋರುತ್ತದೆ. ನನ್ನ ಕೊರಳಲ್ಲಿ ಈ ಮಾಲೆ ಬೀಳಲು ಯಾವ ಕಾರಣವೂ ಇಲ್ಲ. ನನ್ನ ಯಜ-ಮಾನರ ಮನೆಯಲ್ಲಿದ್ದವರಲ್ಲಿ ಯಾರಿಗಾದರೊಬ್ಬರಿಗೆ ಇದು ಸಲ್ಲತಕ್ಕದ್ದು.

ತಪ್ಪಿ ನನ್ನ ಕೊರಳಲ್ಲಿ ಬಿದ್ದಂತೆ ಕಾಣುತ್ತದೆ. ನನ್ನಂಥ ದರಿದ್ರಳ ಕೊರಳಲ್ಲಿ ಯಾಕೆ ಈ ಮಾಲೆ ! ನಾನಂತೂ ಯಾವ ಕಾಣಿಕೆಯನ್ನೂ ಕೊಟ್ಟಿಲ್ಲ.''

ಅಷ್ಟರಲ್ಲಿ ಆ ಚಿಕ್ಕ ಬಾಲಕ ಅಲ್ಲಿಗೆ ಬಂದ. ಅವನ ಮುಖದ ಮೇಲೆ ಕಾಂತಿ ಇತ್ತು. ಸೂರ್ಯ ಮೂಡಿದನೋ ಏನೋ ಅನ್ನುವಂತೆ ತೋರುತ್ತಿತ್ತು. ಜನರೆಲ್ಲ ಬೆರಗಾಗಿ ನೋಡತೊಡಗಿದರು. ಆ ಬಾಲಕ ಅಂದ ''ಸಖೂ, ನೀನೆ ನಿಜವಾಗಿ ಉತ್ತಮವಾದ ಕಾಣಿಕೆ ಕೊಟ್ಟಿರುತ್ತೀ. ಈ ಊರಲ್ಲಿಯ ಪ್ರತಿಯೊಂದು ಮನೆಯ ಬಾಗಿಲ ನಾನು ತಟ್ಟಿದೆ ಮತ್ತು ನಾನು ಅನಾಥ, ನನಗೆ ಆಹಾರ ಕೊಡಿ ಎಂದು ಕೇಳಿದೆ. ಆದರೆ ಎಲ್ಲರೂ 'ಯಾವನೋ ಕಳ್ಳಕಾಣಿಸುತ್ತಾನೆಂದು' ನನಗೆ ಹೊರಗಟ್ಟಿದರು. ಯಾರೂ ಆಶ್ರಯ ಕೊಡಲಿಲ್ಲ. ಆದರೆ ನನ್ನನ್ನು ಪ್ರೇಮದಿಂದ ಬರಮಾಡಿಕೊಂಡವಳು ನೀನೊಬ್ಬಳೇ. ಶೆಟ್ಟರು ಸಾಹುಕಾರರು ಇವರು ಕಾಣಿಕೆ ಕೊಟ್ಟರೆ! ಇಲ್ಲ. ತಾವು ಜೀವಂತ ಇರುವಾಗಲೆ ತಮ್ಮ ನೆನಹುಗಳನ್ನು ನಿಲ್ಲಿಸಿದರು. ತಮ್ಮ ಹೆಸರು ಕೆತ್ತಿದ ಕಲ್ಲುಗಳನ್ನು ಸಾಲೆ ಭಾವಿಗಳ ಮೇಲೆ ನಿಲ್ಲಿಸಿದರು. ಇದು ತಮ್ಮ ಸ್ವಂತದ ಪೂಜೆ. ತಮ್ಮ ಪ್ರತಿಷ್ಠೆಗೆ ಬಹುಕಾಲ ಬಾಳುವ ಒಂದು ರೂಪ ಕೊಟ್ಟರು. ದೇವರು ಅನ್ಯಾಯಿ ಇಲ್ಲ. ಅವನು ಅತ್ಯಂತ ನ್ಯಾಯಿ. ಯಾವ ರೀತಿಯ ಅಪೇಕ್ಷೆಯನ್ನಿಡದೆ ನೀಡಿದ ಪ್ರೇಮವೇ ಈ ಪ್ರಪಂಚದೊಳಗೆ ಎಲ್ಲಕ್ಕೂ ಹೆಚ್ಚಿನ ಕಾಣಿಕೆ. ಪ್ರೀತಿಯು ಭೇದ ಭಾವಗಳ ಆಚೆ ಇರಬೇಕು. ''

'' ಸಬಸೆ ಉಂಚೀ ಪ್ರೇಮ-ಸಗಾಯಿ'' ಎಂದು ಆ ಬಾಲಕ ಅದೃಶ್ಯನಾದ. ಎಲ್ಲರೂ ತಲೆಬಾಗಿಸಿ ನಿಂತುಬಿಟ್ಟರು. ಆ ಮೂವರು ಅಕ್ಕ ತಂಗಿಯರು ಸಖೂಗೆ ಅಂದರು '' ಸಖೂ ನಾವು ಸಾಲೆಗೆ ಹೋಗುತ್ತೇವೆ. ಪುಸ್ತಕಗಳನ್ನು ಓದುತ್ತೇವೆ. ಆದರೆ ನಿನ್ನಂತೆ ವರ್ತಿಸಲಿಕ್ಕೆ ಬರುವದಿಲ್ಲ. ಈ ರೀತಿ ನಡಾವಳಿ ಕಲಿಸಿದವರು ಯಾರು ನಿನಗೆ ?'' ಸಖೂ ಅಂದಳು ''ನನಗಾರು ಕಲಿಸುವವರು ? ನನ್ನ ತಾಯಿಯೊಬ್ಬಳೆ ನನಗೆ ಕಲಿಸುವವಳು. ನನ್ನ ತಾಯಿಯು ನನಗೆ ಹೇಳಿದ್ದಾಳೆ 'ಸಖೂ, ನಾವು ಬಡವರು

ಇದ್ದರೂ ಸವಿಮಾತು ಆಡಬೇಕು. ಎರಡನೆಯವರಿಗಾಗಿ ಮಾಡಬಲ್ಲದ್ದ ನ್ನೆಲ್ಲ ಮಾಡಬೇಕು. ಯಾರನ್ನೂ ಜರಿಯಬಾರದು. ನಾವೆಲ್ಲರೂ ಒಬ್ಬ ದೇವರ ಮಕ್ಕಳೇ.' ನೀವು ಮನಸಿಗೆ ಹೆಚ್ಚಿಗೆ ಹಚ್ಚಿಕೊಳ್ಳಬೇಡಿರಿ. ವ್ಯಸನಪಡಬೇಡಿರಿ. ಈ ಮಾಲೆಯನ್ನು ನಾನು ನಿಮ್ಮ ಮನೆಯಲ್ಲಿ ಇಡು ತ್ತೇನೆ. ನಿಮ್ಮ ಮನೆಯಲ್ಲಿ ಇದರ ಸುವಾಸನೆ ಬೀರಲಿ."

ಮೂವರು ಅಂದರು "ನಮ್ಮ ಜೀವನದಲ್ಲಿ ಬೀರಲಿ. ಸಖೂನಂತೆ ನಮ್ಮ ಜೀವನವಾಗಲಿ."



# ಜಾಯಿ

ರಾಮಜಿ ಮತ್ತು ರಾಘೋಜಿ ಇಬ್ಬರೂ ಜೀವದ ಗೆಳೆಯರು. ಅವರ ದೇಹಗಳು ಎರಡಾಗಿದ್ದರೂ ಒಳಗಿರುವ ಮನಸ್ಸು, ಉಸಿರು, ಜೀವ, ಹೃದಯ ಒಂದೇ ಆಗಿದ್ದವು. ಇವರ ಗೆಳೆತನ ಊರ ಜನರೆಲ್ಲರ ಕೌತುಕದ ಒಂದು ವಿಷಯವಾಗಿತ್ತು.

ಅವರ ಅಭೇದ್ಯವಾದ ಗೆಳೆತನ ಕೆಲವರಿಗೆ ಸಹನವಿದ್ದಿಲ್ಲ. ಇವರಲ್ಲಿ ಬಡಿದಾಟವಾಗಬೇಕೆಂದು ಅವರಿಗೆ ಅನಿಸುತ್ತಿತ್ತು. ನಿಜವಾಗಿ ಒಂದು ದಿನ ಈದುಷ್ಟ ಜನರ ಇಚ್ಛೆಯಂತೆ ಅವರಲ್ಲಿ ಬಡೆದಾಟವಾಯಿತು. ಆ ದಿನ ಯಾವುದೊ ಒಂದು ಕಾರಣದಿಂದ ಮಾತಿಗೆ ಮಾತು ಹತ್ತಿ ಅವರಿಬ್ಬರೂ ಒಬ್ಬರಮೇಲೊಬ್ಬರು ಹರಿಹಾಯ್ದರು. ಪರಸ್ಪರರ ಮುಖ ಸಹ ನೋಡು ವಂತಿಲ್ಲೆಂದು ಇಬ್ಬರೂ ನಿರ್ಣಯಿಸಿದರು. ಇವರಿಬ್ಬರಲ್ಲಿ ರಾಘೋಜಿ ಇದನ್ನು ಮನಸಿಗೆ ಬಹಳ ಹಚ್ಚಿಕೊಂಡನು. ಯಾವ ಊರಲ್ಲಿ ಜೀವದ ಗೆಳೆಯರೆಂದು ಮೆರೆದೆವೋ ಅಲ್ಲಿಯೇ ಬಡೆದಾಡಿದೆವಲ್ಲ! ಎಂಥ ನಾಚಿ ಗೆಯ ಮಾತಿದು! ಎಂಬ ವಿಚಾರದಿಂದ ಅವನಿಗೆ ನಿದ್ದೆ ಬರಲೊಲ್ಲದು; ಊಟ ರುಚಿ ಹತ್ತದು. ಹೀಗೆ ಮನಸ್ಸಿಗೆ ವ್ಯಥೆಯಾಗಿ ಒಂದು ದಿನ ಅವನು ಊರನ್ನು ಬಿಟ್ಟು ಹೋದನು.

ಅವನ ಹೆಂಡತಿ ಅವನು ಇಂದು ಬರಬಹುದು, ನಾಳೆ ಬರಬಹು ದೆಂದು ದಾರಿ ಕಾಯುತ್ತಿದ್ದಳು. ಆದರೆ ರಾಘೋಜಿಯು ಎಲ್ಲಿಗೆ ಹೋದ ನೆಂಬುದು ಸಹ ಅವಳಿಗೆ ತಿಳಿಯಲಿಲ್ಲ. ಅವನ ಹೆಂಡತಿಗೆ ಸಹ ಊಟ ಹೋಗಲೊಲ್ಲದು. ಊಟಕ್ಕೆ ಕೂತೊಡನೆ ಗಂಡನ ನೆನಪಾಗಿ ಹಾಗೆ ಎದ್ದು ಬಿಡುವಳು. ಇದರಿಂದ ಅವಳು ಕ್ಷೀಣಳಾದಳು. ಹಾಸಿಗೆ ಹಿಡಿ ದಳು. ಹೀಗೆ ಕೆಲದಿನಗಳಾದ ಬಳಿಕ ಒಂದು ದಿನ ಗಂಡ ಸತ್ತ ಸುದ್ದಿ ಅವಳ ಕಿವಿಗೆ ಬಂದಿತು. ಆ ದುಷ್ಟವಾರ್ತೆ ಕೇಳಿ ಅವಳು ಎದೆ ಎದೆ ಬಡಿ ಕೊಂಡಳು. ಕೆಲದಿನಗಳಾದ ಬಳಿಕ ಅವಳೂ ಸತ್ತಳು. ಅವಳ ಮಗಳಾದ

ಜಾಯಿ ಅನಾಥಳಾದಳು. ಅವಳನ್ನು ನೋಡಿಕೊಳ್ಳುವವರಾದರೂ ಯಾರು?

ಜಾಯಿಯ ತಾಯಿ ಬೇನೆಯಿಂದ ಬಳಲುತ್ತಿರುವಾಗ ರಾಮಜಿ ಅಲ್ಲಿಗೆ ಹೋಗುತ್ತಿದ್ದ. ಅವಳ ಮರಣದ ತರುವಾಯ ಅವನು ಜಾಯಿ ಯನ್ನು ತನ್ನ ಮನೆಗೆ ಕರೆದೊಯ್ದ. ಜಾಯಿಯ ಸಂರಕ್ಷಣೆ ತಾನು ಮಾಡುತ್ತೇನೆಂದು ಅವನು ಅವಳ ತಾಯಿಗೆ ವಚನ ಕೊಟ್ಟಿದ್ದ. ತಾನು ಬಡಿದಾಡಿದ್ದರಿಂದಲೆ ರಾಘೋಜಿ ಹೋಗಿದ್ದ, ತಮ್ಮಿಬ್ಬರ ಪ್ರೇಮಭಂಗ ಅವನಿಗೆ ಸಹನವಾಗಲಿಲ್ಲ ಎಂಬ ಮಾತಿನ ಅರಿಕೆ ರಾಮಜಿಗೆ ಇತ್ತು. ರಾಮಜಿ ಜಾಯಿಗೆ ತಾಯಿ-ತಂದೆ ಎಲ್ಲವೂ ಆದನು.

ಜಾಯಿಗೆ ಐದು ವರ್ಷಗಳಾಗಿದ್ದವು. ಮತ್ತು ರಾಮಜಿಯ ಮಗ ಮೋಹನನಿಗೆ ಎಂಟು ವರ್ಷಗಳಾಗಿದ್ದವು. ಇಬ್ಬರೂ ಕೂಡಿಯೇ ಆಡು ತ್ತಿದ್ದರು. ಮೋಹನ ಒಳ್ಳೆಯ ಆಟಗಾರ ಅವರಿಬ್ಬರೂ ಕೂಡಿ ಹೊಲಕ್ಕೆ ಹೋಗುತ್ತಿದ್ದರು. ಮೋಹನ ಅವಳ ಗೊಂಬೆ ಶೃಂಗರಿಸಿ ಕೊಡುತ್ತಿದ್ದ. ಗೊಂಬೆಯ ಕೂಡ ಅವನು ಆಡಲಾರಂಭಿಸಿದ ಕೂಡಲೆ ಜಾಯಿ ಅವನಿಗೆ "ನೀನು ಹುಡುಗಿಯೋ?" ಎಂದು ಕೇಳಿದ ಕೂಡಲೆ ಅವನು ಓಡಿ ಹೋಗು ತ್ತಿದ್ದ. ಈ ರೀತಿ ಅವರಿಬ್ಬರ ಬೆಳವಣಿಗೆ ನಡೆದಿತ್ತು. ಇಬ್ಬರು ಕಾಣಲಿಕ್ಕೆ ಚಂದವಾಗಿದ್ದರು. ರಾಮಜಿ ತನ್ನ ಮನಸ್ಸಿನಲ್ಲಿ ಅವರಿಬ್ಬರ ಮದುವೆ ಮಾಡಿ ಬಿಟ್ಟಿದ್ದ. ಈ ಜೋಡಿ ಬಹಳ ಚೆನ್ನಾಗಿ ಕಾಣಿಸುವದು ಮತ್ತು ತನ್ನ ಮೃತ ಗೆಳೆಯನ ಆತ್ಮಕ್ಕೂ ಸಂತೋಷವಾಗುವದೆಂದು ಅವನು ವಿಚಾರ ಮಾಡುತ್ತಿದ್ದ.

ಈ ರೀತಿ ದಿನಗಳು ಕಳೆದವು, ತಿಂಗಳು ಹೋದವು, ವರ್ಷಗಳೂ ಜಾರಿದವು. ಮೋಹನ ಮತ್ತು ಜಾಯಿ ಅಣ್ಣ ಮತ್ತು ತಂಗಿಯಂತೆ ಬೆಳೆಯು ತ್ತಿದ್ದರು. ನಿರ್ಮಲತೆಯಿಂದ, ನಿಷ್ಪಾಪವೃತ್ತಿಯಿಂದ ಅವರು ಬೆಳೆದಿದ್ದರು. ರಾಮಜಿಯ ಮನಸ್ಸಿನಲ್ಲಿದ್ದ ಆಸೆ ಅವರಿಗೇನು ಗೊತ್ತು? ರಾಮಜಿಯ ಸವಿಗನಸು ಅವರಿಗೆ ತಿಳಿಯುವದು ಹೇಗೆ? ಈ ರೀತಿ ಅವರ ಮನಸ್ಸಿನಲ್ಲಿ ಎಳ್ಳಷ್ಟು ಸಂಶಯ ಬರುವಂತೆ ರಾಮಜಿ ಎಂದೂ ವರ್ತಿಸಲಿಲ್ಲ.

ಮೋಹನ ಈಗ ಇಪ್ಪತ್ತು ವರ್ಷದವನಾಗಿದ್ದ. ಅವನ ಬೆಳೆವಣಿಗೆ ಬಹಳ ಉತ್ತಮವಾಗಿತ್ತು. ಅವನು ದೊಡ್ಡ ಆಳು ಆಗಿದ್ದ ಈಗ. ಜಾಯಿ ಹದಿನಾರು ವರ್ಷದವಳಾಗಿದ್ದಳು. ಅವಳು ಬಹಳ ಚಲುವೆಯಾಗಿ ಕಾಣು ತಿದ್ದಳು. ರಾಮುಜಿ ಇಬ್ಬರ ಕಡೆಗೆ ನೋಡಿ ಬಹಳ ಪ್ರಸನ್ನನಾಗುತ್ತಿದ್ದ. ಅವನಿಗೂ ಈಗ ವಯಸ್ಸಾಗಿದ್ದವು. ತನ್ನ ಕನಸು ನನಸಾಗಬೇಕೆಂದ. ಅವನ ಆಸೆ.

ಒಂದು ದಿವಸ ಅವನು ಮೋಹನನನ್ನು ಕರೆದ. ಮೋಹನ ಮಧುರ ವಾಣಿಯಿಂದ "ಯಾಕೆ ಅಪ್ಪಾ ನನ್ನನ್ನು ಕರೆದದ್ದು ?" ಎಂದು ಕೇಳಿದ.

"ಮೋಹನ ನೀನು ಅಜ್ಞಾಧಾರಕ ಹುಡುಗ. ನಿನ್ನ ಮೇಲೆ ನನ್ನ ಪ್ರೇಮ ಬಹಳ. ಈಗ ನನಗಂತೂ ವಯಸ್ಸು ಆಗಿದೆ. ಇನ್ನು ಬಹಳ ದಿನ ಬದುಕುವೆನೆಂದು ಅನಿಸುವದಿಲ್ಲ." ಇಷ್ಟೆಂದು ರಾಮುಜಿ ಸ್ವಲ್ಪ ಹೊತ್ತು ಸುಮ್ಮನಿದ್ದ.

"ಅಪ್ಪಾ! ಹೀಗೇಕೆ ಅನ್ನುತ್ತೀರಿ ? ಇನ್ನೂ ನೀವು ನಮಗೆ ಬಹಳ ದಿವಸ ಬೇಕು. ತಾಯಿಯಂತೂ ಎಂದೋ ನಮ್ಮನ್ನು ಬಿಟ್ಟು ಹೋದಳು. ನೀವೂ ಹೋಗುವಿರಾ ? ನಿಮ್ಮ ಮೋಹನನಿಗೆ ಮತ್ತು ಜಾಯಿಗೆ ನಿಮ್ಮ ಹೊರ್ತು ಮತ್ತಾರಿದ್ದಾರೆ? " ಎಂದು ಮೋಹನ ದುಃಖದಿಂದ ನುಡಿದ.

"ಮೋಹನ ನನ್ನದೊಂದು ತೀವ್ರವಾದ ಆಸೆ ಇದೆ. ನೀನು ಅದನ್ನು ಪೂರೈಸಲೇಬೇಕು. ಈಗ ಬಹಳ ವರ್ಷ ನಾನು ಆ ಆಸೆಯನ್ನು ನನ್ನ ಹೃದಯದಲ್ಲಿ ಜೋಪಾನ ಮಾಡಿದ್ದೇನೆ. ನಿನ್ನ ತಂದೆಯ ಈ ಇಚ್ಛೆಯನ್ನು ನೀನು ಪೂರೈಸುವಿಯಾ ?" ಎಂದು ರಾಮುಜಿ ಕೇಳಿದ.

"ಅಪ್ಪಾ ನಾನು ನಿನ್ನನ್ನು ಮೀರಿ ಇರುವೆನೇ ? ಇಷ್ಟು ದಿವಸ ನೀವೇಕೆ ನನಗೆ ನಿಮ್ಮ ಇಚ್ಛೆಯನ್ನು ತಿಳಿಸಲಿಲ್ಲ? " ಅಂದ ಮೋಹನ.

"ಪ್ರತಿಯೊಂದು ಮಾತಿಗೂ ವೇಳೆ ಬರಬೇಕಾಗುತ್ತದೆ. ಮೋಹನ, ನಿನ್ನ ಮದುವೆ ಮಾಡಬೇಕೆಂಬ ಆಸೆ ಇದೆ. ನೀನು ಮದುವೆಯಾಗು ವಿಯಾ ?" ಎಂದು ರಾಮುಜಿ ಕೇಳಿದ.

"ಅಪ್ಪಾ, ಮೊದಲು ಜಾಯಿಯ ಮದುವೆ. ನೀನೇ ಅವಳಿಗೆ ತಂದೆ ತಾಯಿ. ನಿಮ್ಮಿಂದಲೇ ಅವಳ ಮದುವೆಯಾಗಬೇಕು. ತನ್ನ ತಂದೆ ತಾಯಿಯ ನೆನಹು ಸಹ ಅವಳಿಗೆ ಆಗದಂತೆ ನೀವು ಅವಳನ್ನು ಜೋಪಾನ ಮಾಡಿದ್ದೀರಿ. ಈಗ ಅವಳ ಮದುವೆ ಮೊದಲು ಮಾಡಿರಿ" ಎಂದು ಮೋಹನ ಹೇಳಿದ.

"ನಿಮ್ಮಿಬ್ಬರ ಮದುವೆ ಒಮ್ಮೆಲೆ ಮಾಡಬೇಕೆಂದು ನನ್ನ ಆಸೆ" ಎಂದು ರಾಮಜಿ ನಗುತ್ತ ಅಂದ.

"ಜಾಯಿಗಾಗಿ ನೀವು ಯಾವ ಹುಡುಗನನ್ನು ನೋಡಿದ್ದೀರಿ? ಬಡವ ನಿದ್ದರೂ ಅಡ್ಡಿ ಇಲ್ಲ, ಆದರೆ ಸುದೃಢನಿರಬೇಕು, ಪ್ರಾಮಾಣಿಕನಿ[illegible]ಕು ಮತ್ತು ದುಡಿಯಲು ಗಟ್ಟಿಇರಬೇಕು. ಇಂಥವನನ್ನೇ ನೀವು ಆರಿಸಿದ್ದೀರಲ್ಲವೆ? ಮದುಮಗನಾರು ?" ಎಂದು ಮೋಹನ ಕೇಳಿದ.

"ಆ ಮದುಮಗ ತೀರ ಸಮೀಪ ಇದ್ದಾನೆ. ಇಲ್ಲಿಯೇ ಇರುತ್ತಾನೆ. ನೋಡಲಿಕ್ಕೆ ಚೆಲುವ. ಗುಣದಿಂದ ಬಹಳ ಒಳ್ಳೆಯವನು" ಎಂದು ತಂದೆ ನುಡಿದ. ಒಳ್ಳೇ ಉತ್ಸುಕತೆಯಿಂದ ಮೋಹನ ಕೇಳಿದ "ಯಾರವನು ? ಎಲ್ಲಿ ಇರುತ್ತಾನೆ ?

"ಇಲ್ಲಿಯೇ" ಎಂದು ತಂದೆ ಉತ್ತರವಿತ್ತ. "ಅವನ ಹೆಸರು ?" ಎಂದು ಮೋಹನ ಉತಾವಳಿಯಾಗಿ ಕೇಳಿದ. "ಅವನ ಹೆಸರು ಮೋಹನ" ಎಂದು ರಾಮಜಿ ನುಡಿದ. ಒಂದು ನಿಮಿಷ ಯಾರೂ ಮಾತಾಡಲಿಲ್ಲ. ಇಬ್ಬರೂ ಗಂಭೀರರಾಗಿದ್ದರು. ಇಬ್ಬರೂ ವಿಚಾರಮಗ್ನರಾದರು. ತಂದೆ ಮಗನನ್ನು ನೋಡುತ್ತಿದ್ದ.

"ಅಶಕ್ಯ ! ಅಶಕ್ಯ !" ಎಂಬ ಶಬ್ದ ಮೋಹನನ ನಡ[illegible]ಟಿಯಿಂದ ಹೊರಬಿದ್ದವು. "ಯಾಕೆ ಅಶಕ್ಯ ?" ಎಂದು ತಂ[illegible]ದ. "ಮೋಹನ-ಜಾಯಿ ಇವರ ಮದುವೆ ಎಂದಿಗೂ ಸಾಧ್ಯವಿ[illegible]ಂದ ಮೋಹನ. "ಅಶಕ್ಯವೆಂದೆನ್ನುವವರು ಯಾರು ?" ಎಂದು ಕೇ[illegible]ತ್ತ

ಸ್ವರದಲ್ಲಿ ತಂದೆ ಅಂದ. “ ನಾನು ” ಎಂದು ನಮ್ರಸ್ವರದಿಂದ ಮೋಹನ ಉತ್ತರಕೊಟ್ಟ. “ಮೋಹನ ! ಇಂದಿನ ವರೆಗೆ ನೀನು ಎಂದಿಗೂ ನನ್ನ ಮಾತು ಮೀರಿಲ್ಲ. ನಿನ್ನ ವಯಸ್ಸು ತಂದೆಯ ಮಾತು ಮೀರಬೇಡ. ಅವನ ಮನಸ್ಸು ನೋಯಿಸಬೇಡ ” ಎಂದು ರಾಮಜಿ ಅಂದ.

“ ಅಪ್ಪಾ ಇದೊಂದು ಮಾತು ಬಿಟ್ಟು ಬೇಕಾದ ಆಜ್ಞೆ ಕೊಡು. ನಾನು ಅದನ್ನು ಪಾಲಿಸುವೆ. ಗುಡ್ಡದ ಮೇಲಿಂದ ಹಾರಲು ಹೇಳು, ವಿಷ ಕುಡಿಯಲು ಹೇಳು, ಸಮುದ್ರದಲ್ಲಿ ಮುಳುಗಲು ಹೇಳು. ಈ ಮೋಹನ ಅವನ್ನೆಲ್ಲ ಆನಂದದಿಂದ ಮಾಡುವನು” ಎಂದು ಧೃಡವಾಗಿ ಮೋಹನ ಹೇಳಿದ.

“ ಏಕದು? ಜಾಯಿಯನ್ನು ಕರೆತಂದ ದಿವಸದಿಂದ ಈ ಕನಸು ನನ್ನ ಮನಸಿನಲ್ಲಿ ಸುಳಿಯುತ್ತಿದೆ. ಇಷ್ಟು ವರ್ಷ ಜೋಪಾನ ಮಾಡಿದ ಆಸೆ ಮಣ್ಣುಪಾಲು ಮಾಡುತ್ತೀಯಾ? ನನ್ನ ಮನೆಯಲ್ಲಿ ಇರುವದಿದ್ದರೆ ಮೋಹನ! ನನ್ನ ಆಜ್ಞೆ ನೀನು ಪಾಲಿಸಲೇಬೇಕು. ನನ್ನ ತಂದೆ ಆಜ್ಞಾ ಭಂಗವನ್ನು ಸಹಿಸಲಿಲ್ಲ. ನಿನ್ನ ತಂದೆಯೂ ಅವರಂತೆ ಸಹಿಸುವವನಲ್ಲ. ತಂದೆಯ ಮಾತು ಮಗ ಕೇಳಲೇಬೇಕು ಎಂಬುದು ನಮ್ಮ ಕುಲಪರಂಪರೆ. ಈ ಪರಂಪರೆಯನ್ನು ನೀನು ನಡೆಸಲೇ ಬೇಕು” ಎಂದು ರಾಮಜಿ ಧೃಡ ಸ್ವರದಿಂದ ಹೇಳಿದ. “ ಅಪ್ಪಾ! ಜಾಯಿ ಮತ್ತು ನಾನು ಇಂದಿನ ವರೆಗೆ ಅಣ್ಣ ಮತ್ತು ತಂಗಿಯರಂತೆ ಭಾವಿಸಿ ಬೆಳೆದಿದ್ದೇವೆ. ಎರಡನೆಯ ವಿಚಾರ ನಮ್ಮ ಮನಸ್ಸಿಗೆ ಎಂದಿಗೂ ತಾಕಿಲ್ಲ. ತಂಗಿಯೊಡನೆ ಮದು ವೆಯೇ? ತಂದೆಯ ಅಪವಿತ್ರ ಆಜ್ಞೆಯನ್ನು ಮಗನು ಪಾಲಿಸಬೇಕೇ? ತಂದೆ ದೊಡ್ಡವನು ಅಹುದು. ಆದರೆ ಸತ್ಯ, ಪಾವಿತ್ರ್ಯ ಅವನಿಗಿಂತ ಹಿರಿ ದಾದ ವಸ್ತುಗಳು. ಕುಲದಲ್ಲಿದ್ದ ಪವಿತ್ರ ಪರಂಪರೆಗಳನ್ನು ಪಾಲಿಸಬೇಕು. ಅಪವಿತ್ರ ಪರಂಪರೆಗಳನ್ನು ಬಂದು ಮಾಡಬೇಕು ” ಎಂದು ಮೋಹನ ವಿನಯದಿಂದ ಹೇಳಿದ.

ರಾಮಜಿ ಕೋಪಗೊಂಡ. ಅವನು ರೇಗಿಗೆದ್ದು ನಡುಗತೊಡಗಿದ. ಅವನು ಮೋಹನನಿಗೆ “ಮೋಹನ! ನಾನು ನಿನಗೆ ಒಂದು ತಿಂಗಳ ಅವಧಿ

ಕೊಡುತ್ತೇನೆ. ಅಷ್ಟರಲ್ಲಿ ನೀನು ವಿಚಾರಮಾಡಿ ನನಗೆ ತಿಳಿಸು. ಒಳ್ಳೆ ಮಾತಿನಿಂದ ನಾನು ಹೇಳಿದಂತೆ ಕೇಳು, ಇಲ್ಲದಿದ್ದರೆ ನಿನ್ನ ಮುಖ ನನಗೆ ತೋರಿಸಬೇಡ. ನನಗೆ ಮಗನೇ ಇದ್ದಿಲ್ಲವೆಂದು ನಾನು ತಿಳಿದು ಮೋಹನನು ಸತ್ತನೆಂದು ಭಾವಿಸುವೆ. ಹೋಗು ನನ್ನೆದುರು ನಿಲ್ಲಬೇಡ" ಎಂದು ನುಡಿದುಬಿಟ್ಟ.

ಅಂದಿನಿಂದ ಮೋಹನ ಮನೆಯಲ್ಲಿ ಬಹಳ ಸಮಯ ಇರುತ್ತಿದ್ದಿಲ್ಲ. ಮನೆ ಬಿಟ್ಟು ಇರುವ ಅಭ್ಯಾಸವನ್ನೇ ನಡೆಸಿದ್ದ. ಯಾರೊಡನೆಯೂ ಮಾತಿಲ್ಲ, ಆಟವಿಲ್ಲ. ನಗುವದೂ ಇಲ್ಲ. ಅವನು ಯಾವಾಗಲೂ ಖಿನ್ನ ಮತ್ತು ಉದಾಸವಾಗಿಯೇ ಇರುತ್ತಿದ್ದ. ಜಾಯಿ ಅವನ ಹತ್ತರ ಹೋಗಿ ನಾಲ್ಕು ಸವಿಮಾತು ಆಡಲು ಯತ್ನಿಸುತ್ತಿದ್ದಳು. ಆದರೆ ಅವನು ಅವಳು ಹತ್ತಿರ ಬಂದೊಡನೆ ಹೊರಗೆ ಹೋಗುತ್ತಿದ್ದ. ಅವಳ ಜೀವ ಮರಮರ ಮರಗುತ್ತಿತ್ತು.

ತಂದೆ ಕೊಟ್ಟ ಅವಧಿ ಮುಗಿಯಿತು. ಮೈಮೇಲಿದ್ದ ಅರಿವೆಯನ್ನಷ್ಟೇ ತಕ್ಕೊಂಡು ಮನೆ ಬಿಟ್ಟು ಹೊರಬಿದ್ದ. ಸುಖದಲ್ಲಿಯೇ ಬೆಳೆದ ಮೋಹನ! ಅವನು ತಿನ್ನುವದೇನು? ಇರುವದೆಲ್ಲಿ? ಅವನೊಂದು ಸಣ್ಣ ಗುಡಿಸಲಲ್ಲಿ ಇರಲಾರಂಭಿಸಿದ. ಕೂಲಿಕೆಲಸ ಮಾಡತೊಡಗಿದ. ಮಳೆ, ಗಾಳಿ, ಬಿಸಿಲಿನಲ್ಲಿ ಉಪ್ಪಾರರ, ಒಕ್ಕಲಿಗರ ಬಳಿ ದುಡಿಯತೊಡಗಿದ. ಅವನ ಕೋಮಲವಾದ ಕೈಗೆ ಹುಣ್ಣುಗಳಾದವು. ಆದಾಗ್ಯೂ ಹಾಗೆಯೇ ದುಡಿತ ಮುಂದರಿಸಿದ. ಕೆಲದಿನಗಳಾದ ನಂತರ ರೂಢಿಯಾಯಿತು. ಕೆಲವು ತಿಂಗಳಾದ ಮೇಲೆ ಮೋಹನ ಗಜರಾ ಎಂಬ ಬಡ ಹುಡುಗಿಯೊಡನೆ ಮದುವೆಯಾದ. ಮೋಹನ-ಗಜರಾ ಇಬ್ಬರೂ ದುಡಿಯುತ್ತಿದ್ದರು. ಗುಡಿಸಲದಲ್ಲೆ ಸಗ್ಗದ ಸುಖ ಉಣ್ಣುತ್ತಿದ್ದರು. ಇಬ್ಬರೂ ಕೂಡಿ ನೀರು ಜಗ್ಗುವರು, ಬೀಸುವರು, ಹೀಗೆ ಪರಸ್ಪರರಿಗೆ ಸಹಾಯ ಮಾಡುತ್ತಿದ್ದರು. ಬೀಸುವಾಗ ಗಜರಾ ಹಾಡು ಹಾಡುತ್ತಿದ್ದಳು.

ಮೋಹನ ಮದುವೆಯಾದದ್ದು ಕೇಳಿ ರಾಮಜಿ ಮತ್ತಷ್ಟು ರೇಗಿಗೆದ್ದ. ಅವನು ಜಾಯಿಗೆ ಕರೆದು ಹೇಳಿದ "ಜಾಯೀ! ನೀನು ಮೋಹನನ ಕಡೆಗೆ

ಹೋಗಕೂಡದು. ಅವನ ಬಳಿಗೆ ಹೋದುದು ನನಗೆ ತಿಳಿದರೆ ನೀನೂ ನನ್ನ ಮನೆ ಬಿಡಬೇಕಾಗುವದು. ವಿಚಾರದಿಂದ ನಡೆ. ತಿಳಿಯಿತೇನು?"

ಮೋಹನನ ಮನೆಗೆ ಹೋಗಬೇಕೆಂದು ಜಾಯಿಗೆ ಅನಿಸುತ್ತಿತ್ತು. ಆದರೆ ಹೋಗುವ ಧೈರ್ಯವಿದ್ದಿಲ್ಲ. ಮತ್ತೆ ಮೋಹನನಾದರೂ ಅವಳೊಡನೆ ಮಾತನಾಡುವನೋ ಇಲ್ಲವೋ ಇದರ ಭರವಸೆ ಇದ್ದಿಲ್ಲ. ಮನಸಿನಲ್ಲಿದ್ದ ದುಃಖವನ್ನು ಆಡಿ ತೋರಿಸುವದಾದರೂ ಯಾರೆದುರು? ರಾಮಜಿ-ಮೋಹನ ಇಬ್ಬರೂ ಅವಳಿಗೆ ಬೇಕಾದವರು, ಇಬ್ಬರಲ್ಲಿಯೂ ಅವಳ ಜೀವ. ತಾನು ಹೋದರೆ ಮುದುಕ ರಾಮಜಿಯನ್ನು ನೋಡುವವರಾರು? ಎಂದು ಅವಳಿಗೆ ಯೋಚನೆ.

ಜಾಯಿಯ ಮದುವೆಯಂತೂ ದೂರ ಹೋಯಿತು ಅವಳ ಮದುವೆ ಮಾಡಬೇಕೆಂದು ರಾಮಜಿಗೆ ಎನಿಸಲೊಲ್ಲದು. ಜಾಯಿ ತನ್ನ ಗಂಡನ ಮನೆಗೆ ಹೋದರೆ ವಾರ್ಧಕ್ಯದಲ್ಲಿ ತನ್ನನ್ನು ನೋಡುವವರಾರು ಎಂಬ ಸ್ವಾರ್ಥಿ ವಿಚಾರವೇ ಅವನಲ್ಲಿ ಇದ್ದಂತೆ ತೋರುತ್ತಿತ್ತು; ಇದಲ್ಲದೆ ತನ್ನ ಹತ್ತಿಪ್ಪತ್ತು ವರ್ಷದ ಕನಸು ತನ್ನ ಕೈಯಿಂದಲೆ ನಾಶ ಮಾಡುವದು ಕಠಿಣವಾಯಿತು. ಜಾಯಿ-ಮೋಹನ ಈ ಚಿತ್ರವನ್ನೆ ಅವನು ಕಾಣು ತ್ತಿದ್ದ. ಜಾಯಿಯ ಮದುವೆಯನ್ನು ಎರಡನೆಯವರೊಡನೆ ಮಾಡುವ ವಿಚಾರವೇ ಅವನಿಗೆ ಸಹನವಾಗುತ್ತಿದ್ದಿಲ್ಲ. ಜಾಯಿ! ಅವಳಂತೂ ಮದುವೆಯ ವಿಚಾರವನ್ನೇ ಮಾಡುತ್ತಿದ್ದಿಲ್ಲ. ರಾಮಜಿಯನ್ನು ನೋಡಿ ಅವಳಿಗೆ ದಯೆಯುಂಟಾಗುತ್ತಿತ್ತು. ಅವನ ಸೇವೆಯನ್ನು ಕೃತಜ್ಞತೆ ಯಿಂದ ಮಾಡುತ್ತಿದ್ದಳು.

ರಾಮಜಿಯ ಮನೆಯಲ್ಲಿಯ ಕಣಜಗಳಲ್ಲಿ ಕಾಳು ತುಂಬಿದ್ದವು. ತಿನ್ನುವರಾರೂ ಇದ್ದಿಲ್ಲ! ಮೋಹನನಿಗೆ ಬಿಸಿಲುಗಾಳಿಯಲ್ಲಿ ದುಡಿದು ತಿನ್ನಬೇಕಾಗಿತ್ತು. ಜಾಯಿಯ ಮನಸಿಗೆ ವೇದನೆಯಾಗುತ್ತಿತ್ತು.

ಮೋಹನ ತನ್ನ ತಂದೆಯ ಮನೆಯ ಸಮೀಪ ಸಹ ಹಾಯುತ್ತಿ ದ್ದಿಲ್ಲ ತನ್ನ ತಂದೆಯ ಸಂಪತ್ತು, ಹೊಲ, ಮನೆ, ಎಲ್ಲಿಯಾದರೂ ತನ್ನ

ಮನಸ್ಸನ್ನು ಸೆಳೆಯಬಹುದೆಂದು ತಿಳಿದು ಆ ದಿಕ್ಕೇ ಬೇಡ ಅನ್ನುತ್ತಿದ್ದ. ತನ್ನ ಕ್ಷೀಣವಾದ ದೇಹ ಜಾಯಿಯ ದೃಷ್ಟಿಗೆ ಬೀಳಬಾರದೆಂದು ಅವನ ಮನಸ್ಸು ಹೇಳುತ್ತಿತ್ತು. ರಾಮಜಿ ಹೊರಗೆ ಕಟ್ಟೆಯ ಮೇಲೆ ಕೂತು-ಕೊಳ್ಳುತ್ತಿದ್ದ. ಏಕೋ! ಮಗ ಒಂದು ದಿನ ತಿರುಗಿ ಬರಬಹುದೆಂದು ಮನಸಿನಲ್ಲಿ ಎನಿಸುತ್ತಿತ್ತೋ ಏನೋ!

ಮೋಹನನಿಗೆ ಮೈಮುರಿದು ದುಡಿಯುವ ಅಭ್ಯಾಸವಿದ್ದಿಲ್ಲ. ಒಮ್ಮೆಲೆ ದುಡಿಯಬೇಕಾದ್ದರಿಂದ ಅವನ ದೇಹದ ಮೇಲೆ ಪರಿಣಾಮವಾಯಿತು. ಅವನು ಅಶಕ್ತನಾಗಿದ್ದ. ಗಜರಾ ಹಡೆದಿದ್ದಳು. ಅವಳಿಗೆ ದುಡಿಯಲಿಕ್ಕೆ ಹೋಗುವದು ಸಾಧ್ಯವಿದ್ದಿಲ್ಲ. ಮನೆ ಕೆಲಸ ಅವನೇ ಮಾಡುತ್ತಿದ್ದ ಮತ್ತು ಹೊರಗೆ ಹೋರೆಗೆ ಹೋಗುತ್ತಿದ್ದ. ಇದರಿಂದ ಬಹಳ ದಣಿಯುತ್ತಿದ್ದ.

ಒಂದು ದಿನ ಮೋಹನ ಬಹಳ ದಣಿದು ಮನೆಗೆ ಬಂದ. ತನ್ನ ಮಗನನ್ನು ಆಡಿಸುತ್ತಿದ್ದ. ಮಗುವಿನ ಹಾಸ್ಯ ಕಂಡು ಅವನ ದಣಿವು ಆರಿತು. ಆದರೆ ಒಮ್ಮೆಲೆ ತಲೆ ತಿರುಗತೊಡಗಿತು. ಅವನು ಮಗುವನ್ನು ಕೆಳಗಿಳಿಸುವಷ್ಟರಲ್ಲಿ ಬಿದ್ದ. ಗಜರಾ ಓಡಿ ಬಂದಳು. ಮೋಹನನನ್ನು ಎಚ್ಚರಿಸಿ ಒಳಗೆ ಮಲಗಿಸಿದಳು.

ಅವನಿಗೆ ಭಯಂಕರ ಜ್ವರ ಬಂದವು. ಗಜರಾ ಗಾಬರಿಗೊಂಡಳು. ಬಡವರಿಗೆಲ್ಲಿ ಡಾಕ್ಟರರು? ಗಜರಾ ಅಳುತ್ತ ಕುಳಿತಳು. ಮೋಹನ "ಅಳ ಬೇಡ, ನೀನು ಅತ್ತರೆ ನನಗೆ ಸಂಕಟ. ಮಗುವನ್ನು ಕರಕೊಂಡು ನನ್ನ ಹತ್ತಿರ ಕೂತುಕೊ. ಅದರಲ್ಲಿ ನನಗೆ ಸಮಾಧಾನವಿದೆ." ಎಂದು ನುಡಿದ.

ಮೋಹನನ ಬೇನೆ ಕಡಿಮೆಯಾಗಲಿಲ್ಲ. ಕೆಲಸಕ್ಕೆ ಹೋಗುವದೂ ಅಸಾಧ್ಯವಾಯಿತು. ಮನೆಯಲ್ಲಿ ತಿನ್ನಲಿಕ್ಕೆ ಇಲ್ಲ. ಜಾಯಿಗೆ ಈ ಮಾತು ತಿಳಿಯಿತು. ರಾಮಜಿಗೆ ತಿಳಿಯಗೊಡದೆ ಅವಳು ಹಾಲು, ಹಣ್ಣು ಮೋಹನನ ಹೆಂಡತಿಗೆ ಕಳುಹಿಸುತ್ತಿದ್ದಳು. ಮೋಹನನ ಮರಣಕಾಲ

ಸಮೀಪಿಸಿತು. ಜಾಯಿ ಅವನಿಗೆ ಭೆಟ್ಟಿಯಾಗಬೇಕೆಂದು ಚಡಪಡಿಸಿದಳು. ಅವರಿಬ್ಬರ ಭೆಟ್ಟಿ ಈ ಜನ್ಮದಲ್ಲಿಯಂತೂ ಆಗುವದಿದ್ದಿಲ್ಲ. ಮೋಹನ ತೀರಿಕೊಂಡ.

ಗಜರಾನ ದುಃಖಕ್ಕೆ ಮಿತಿಯೇ ಇದ್ದಿಲ್ಲ. ಅವಳಿಗೆ ಯಾರ ಆಧಾರವೂ ಇಲ್ಲ. ತೌರುಮನೆಯಲ್ಲಿಯಂತೂ ಯಾರೂ ಇದ್ದಿಲ್ಲ. ಮಾವನಿದ್ದೂ ಇರದಂತೆಯೇ ಸೈ. ತನ್ನ ಮಗುವನ್ನು ತೊಡೆಯ ಮೇಲೆ ಕೂಡಿಸಿಕೊಂಡು ಅಳುವಳು. ಆದರೆ ಬಡವರಿಗೆ ಅಳುವದಕ್ಕಾದರೂ ಸಮಯವೆಲ್ಲಿ? ದುಡಿಯದಿದ್ದರೆ ಹೊಟ್ಟೆಗೆ ಇಲ್ಲ. ಆದರೆ ಕೆಲಸಕ್ಕಾದರೂ ಹೋಗುವದು ಹೇಗೆ ? ಮಗುವನ್ನು ಇಡುವದೆಲ್ಲಿ ? ಸಂಗಡ ಕರೆದುಕೊಂಡು ಹೋದರೆ ಮಗುವಿಗೆ ಅಪಾಯವಾಗುವದೆಂದು ಅವಳ ತಿಳಿವಳಿಕೆ.

ಮೋಹನ ಸತ್ತುದು ರಾಮುಜಿಗೆ ತಿಳಿಯಿತು. ಜಾಯಿ ಅತ್ತಳು. ಒಂದು ದಿನ ಅವಳು ಮನಸಿನಲ್ಲಿ ನಿರ್ಧಾರಮಾಡಿ, ರಾಮುಜಿಗೆ ಹೇಳದೆ ಗಜರಾನ ಮನೆಗೆ ಹೋದಳು. ಗಜರಾ ಮಗನನ್ನು ಕೂಡಿಸಿಕೊಂಡು ಕೂತಿದ್ದಳು. ಜಾಯಿ ಗಜರೆಗೆ "ನಾವಿಬ್ಬರೂ ಕೂಡಿ ದುಡಿಯುವ. ಹುಡುಗನನ್ನು ಬೆಳೆಸುವ. ನೀನೊಮ್ಮೆ ಕೆಲಸಕ್ಕೆ ಹೋಗು, ನಾನು ಒಮ್ಮೆ ಕೆಲಸಕ್ಕೆ ಹೋಗುವೆ." ಎಂದು ಹೇಳಿದಳು.

ಗಜರಾ ಅಂದಳು "ನೀವೇಕೆ ಈ ದುಃಖದಲ್ಲಿ ಬರುವದು ? ಮಾವಂದಿರು ನಿಮ್ಮನ್ನು ಮನೆಯಲ್ಲಿ ಕರೆದುಕೊಳ್ಳಲಿಕ್ಕಿಲ್ಲ. ನಾವಿಬ್ಬರೂ ದುಃಖದಲ್ಲಿದ್ದೇವೆ. ಅಷ್ಟೇ ಸಾಕು. ಹೇಗಾದರೂ ಮಾಡಿ ನಾನು ಸಾಗಿಸುತ್ತೇನೆ. ಅಸಾಧ್ಯವಾದರೆ ಅವರಿದ್ದಲ್ಲಿ ಇಬ್ಬರೂ ಹೋಗುತ್ತೇವೆ." ಈ ನುಡಿ ಕೇಳಿ ಜಾಯಿಯ ಕಣ್ಣಿನಲ್ಲಿ ಕಣ್ಣೀರು ಸುರಿಯತೊಡಗಿದವು. ಕಕ್ಕುಲತೆಯಿಂದ ಅವಳು ಅಂದಳು "ಗಜರಾ, ಇಷ್ಟೇಕೆ ಕಠೋರತೆ ನಿನ್ನಲ್ಲಿ ? ಈ ಗುಡಿಸಲದಲ್ಲಿ ನನಗೆ ಸಮಾಧಾನ, ಬಡತನ ನನಗೆ ಪ್ರಿಯವಾದದ್ದು. ನಾನು ಹುಟ್ಟಾ ದುರ್ದೈವಿ. ನಾನು ಹುಟ್ಟಿದಾಕ್ಷಣ ತಂದೆ ಊರ ಬಿಟ್ಟ. ಮತ್ತು ತೀರಿಕೊಂಡ. ತಾಯಿ ತೀರಿಕೊಂಡಳು. ಈ ಮನೆಗೆ ಬಂದೆ; ತಂದೆ-ಮಗ

ಬೇರೆಯಾದರು. ನನ್ನ ಕಾಲಗುಣ. ಮೋಹನ ದುಡಿದು ಸತ್ತ. ಇದಕ್ಕೆಲ್ಲ ನಾನೇ ಕಾರಣ ! ಇದಕ್ಕಿಂತ ನನ್ನ ತಾಯಿ ಹುಟ್ಟಿದಾಕ್ಷಣವೇ ನನ್ನನ್ನೇಕೆ ಕೊಲ್ಲಲಿಲ್ಲ ? ದೇವರಾದರೂ ನನಗೇಕೆ ಜೀವಂತ ಇಟ್ಟಿದ್ದಾನೊ ? ತಿಳಿಯದು ನನಗೆ. ನನಗೆ ದುಡ್ಡು ಬೇಡ; ದುಡಿತವೇ ಬೇಕು. ಸಿರಿ ಬೇಡ; ಬಡತನದ ಭಾಗ್ಯವೇ ಬೇಕು ಬೇಡ, ಹೀಗೆ ಅನ್ನಬೇಡ. ನಿನ್ನ ಹತ್ತಿರವೇ ನಾನಿರುವೆ. ”

ಜಾಯಿ ಗಜರಾ ಕೂಡಿ ಇರತೊಡಗಿದರು. ಚಿಕ್ಕ ಮಗು ಬೆಳೆಯಲಾರಂಭಿಸಿತು. ಜಾಯಿ ವಿಚಾರಮಾಡಿದಳು. ಮುದುಕ ರಾಮಜಿ ಈ ಚಿಕ್ಕ ಬಾಲಕನನ್ನು ತನ್ನ ಹತ್ತಿರ ಇಟ್ಟುಕೊಳ್ಳಲಿಕ್ಕಿಲ್ಲವೇ? ಮೋಹನನ ಮರಣದ ಚಿಂತೆ, ಅವನು ಮೇಲೆ ತೋರದಿದ್ದರೂ ಒಳಗಿಂದೊಳಗೆ ಅವನನ್ನು ಅದು ಸಣ್ಣ ಮಾಡಿದೆ. ಅವನು ಮೋಹನನನ್ನು ಮನೆಯಲ್ಲಿ ಬರಗೊಡಲಿಲ್ಲ. ಆದರೆ ಈ ಬಾಲಕನ ಅಪರಾಧವೇನು ? ಬಾಲಕನು ಏಕೆ ಬಡತನದ ಕಷ್ಟನಷ್ಟಗಳನ್ನು ಸೋಸಬೇಕು ? ರಾಮಜಿ ಆನಂದದಿಂದ ಈ ಬಾಲಕನನ್ನು ಸ್ವೀಕರಿಸುವನು. ಮೊಮ್ಮಗನನ್ನು ಆಡಿಸುವನು, ಉಣಿಸುವನು, ಬೆಳೆಯಿಸುವನು.

ಜಾಯಿ ತನ್ನ ವಿಚಾರಗಳನ್ನೆಲ್ಲ ಗಜರಾನಿಗೆ ತಿಳಿಸಿದಳು. ಅವಳು ಮೊದಲು ಒಪ್ಪಲಿಲ್ಲ. ಆದರೆ ಕೊನೆಗೊಮ್ಮೆ ಒಪ್ಪಿಗೆಯನ್ನಿತ್ತಳು. ತನ್ನ ಮಗ ಬಡತನದ ಬಾಳುವೆಯಲ್ಲಿ ಕೊಳೆಯಬೇಕೆನ್ನುವದು ಯಾವ ತಾಯಿಗೆ ರುಚಿಸುವದು? ಮೋಹನ ಬಡತನದಿಂದಲೇ ಸತ್ತ. ಅವನ ಮಗನಾದರೂ ನೂರು ವರ್ಷ ಬಾಳಲಿ ಎಂದು ಎನಿಸಿತು ಅವಳಿಗೆ. ಅವಳು ಈ ರೀತಿಯಿಂದ ವಿಚಾರಮಾಡಿ ಜಾಯಿಗೆ ಅಂದಳು “ ಮಾವಂದಿರು ಗಟ್ಟಿ ಮನಸ್ಸಿನವರು ಕಲ್ಲುಹೃದಯದವರು. ಅವರು ಈ ಮಗುವನ್ನು ಕರೆಯುಕೊಳ್ಳಲಿಕ್ಕಿಲ್ಲ. ನೀವು ಪ್ರಯತ್ನ ಮಾಡಿರಿ ನನ್ನದೇನೂ ಅಡ್ಡಿ ಇಲ್ಲ ”

ಜಾಯಿಯ ಮನಸ್ಸಿಗೆ ಸಮಾಧಾನವೆನಿಸಿತು. ಹಿಂಗಾರಿಯ ಬೆಳೆ ಹೊಲದಲ್ಲಿ ತುಂಬಾ ನಿಂತಿತ್ತು. ಗೋದಿ ತಯಾರಾಗಿತ್ತು. ಹೊಲಗಳೆಲ್ಲ

ಹೊಂಬಣ್ಣದಿಂದ ಕಂಗೊಳಿಸುತ್ತಿದ್ದವು. ಈ ವರ್ಷ ರಾಮಜೀಯ ಜಮೀನು ಮಿತಿಮೀರಿ ಬೆಳೆದಿದ್ದವು. ರಾಮಜಿಯ ಮೋಹನ ಸತ್ತಿದ್ದ. ಆದರೆ ಹೊಲದಲ್ಲಿ ಬೆಳೆಮಾತ್ರ ಹದಿನಾರು ಆಣೆ.

ಗೋದಿ ಕೀಳುವದು ನಡೆದಿತ್ತು. ರಾಮಜಿ ಸ್ವತಃ ಹೊಲದಲ್ಲಿ ನಿಂತು ಕೆಲಸ ಮಾಡಿಸುತ್ತಿದ್ದ. ಅವನು ಗಿಡದ ನೆರಳಲ್ಲಿ ನಿಂತುಕೊಂಡಿದ್ದ. ಜಾಯಿ ಮೋಹನನ ಮಗುವನ್ನು ಎತ್ತಿಕೊಂಡು ಹೊಲಕ್ಕೆ ಹೊರಟಳು. ಮಗುವಿನ ಮೇಲೆ ಅವಳ ಜೀವ ಬಹಳ. ಮಕ್ಕಳಿಗೂ ಪ್ರೀತಿಯು ಅರಿವು ಇರುತ್ತದೆ. ಹೇಗಾದರೂ ಈ ಮಗುವನ್ನು ರಾಮಜಿಯು ಕಣ್ಣಿಗೆ ಹಾಕಬೇಕು ಎಂದು ಜಾಯಿ ಯೋಚಿಸಿದಳು. ಹೊಲಕ್ಕೆ ಹೋಗಿ ಅಲ್ಲಿ ಒಂದು ಹಾಸುಗಲ್ಲಿನ ಮೇಲೆ ಕುಳಿತಳು. ಅಲ್ಲಿ ಸಣ್ಣ ಗಿಡಗಳ ನೆರಳಿತ್ತು. ಮಗು ಸೊಗಸಾಗಿತ್ತು. ಮತ್ತಿಷ್ಟು ಚಂದಕಾಣಬೇಕೆಂದು ಹೂವಿನಿಂದ ಮಗುವನ್ನು ಶೃಂಗರಿಸಿದ್ದಳು. ಅದು ಬಾಲಕೃಷ್ಣನ ಮೂರುತಿಯಂತೆ ಕಾಣುತ್ತಿತ್ತು. ಜಾಯಿ ಮಗುವಿಗೆ ಮುದ್ದಿಡುತ್ತಿದ್ದಳು. "ಮಗುವಿಗೆ ಅನ್ನುತ್ತಿದ್ದಳು ' ಅಜ್ಜ ನಿನ್ನನ್ನು ಕರೆದುಕೊಳ್ಳುವನು. ಅವನ ಕುಲದಲ್ಲಿಯ ಮುತ್ತು ನೀನು; ವಂಶದ ಬೀಜ. ಎಷ್ಟು ಅಂದವಾಗಿರುವೆ ನೀನು ಕಂದಾ! ನಿನ್ನಂಥ ಮಗುವನ್ನು ಎತ್ತಿಕೊಳ್ಳದೆ ಯಾರೂ ಇರರು. ನಿನ್ನ ಕಾಲಿಗೆ ನೆಡಬಾರದೆಂದು ಮುಳ್ಳು ಮೊಂಡಾಗುವವು, ಕಲ್ಲು ಮೆತ್ತಗಾಗುವವು. ಅಂದಮೇಲೆ ಅಜ್ಜನ ಕರುಳು ಕರಗಲಿಕ್ಕಿಲ್ಲವೇ ? ಹೌದು. ಅಜ್ಜನ ಕಲ್ಲು ಹೃದಯವು ನಿನ್ನನ್ನು ನೋಡಿದ ಕೂಡಲೆ ಬೆಣ್ಣೆಯಂತೆ ಮೆತ್ತಗಾಗುವದು." ಹೀಗೆನ್ನುತ್ತ ಆಸೆಯಿಂದ ಜಾಯಿ ಒಡ್ಡಿನ ಮೇಲೆ ಕುಳಿತಳು.

ಆಳುಗಳೆಲ್ಲ ಜಾಯಿಯನ್ನು ಕಂಡರು. ಆದರೆ ರಾಮಜಿಗೆ ತಿಳಿಸುವ ಧೈರ್ಯ ಯಾರಿಗೂ ಆಗಲೊಲ್ಲದು. ಮುದುಕನ ಕೋಪದ ಪರಿಚಯ ಎಲ್ಲರಿಗಿತ್ತು. ಸೂರ್ಯಾಸ್ತವಾಯಿತು. ಕತ್ತಲೆ ಕವಿಯಹತ್ತಿತು. ಜಾಯಿಯ ಆಶಾಸೂರ್ಯವು ಮುಳುಗಿತು. ಹೃದಯಾಕಾಶದಲ್ಲಿ ಕತ್ತಲೆ ಹಬ್ಬಿತು.

ಮರುದಿನ ಮತ್ತೆ ಬಂದು ಅಲ್ಲಿ ಕುಳಿತಳು. ಹಕ್ಕಿ ಹಾಡುತ್ತಿದ್ದವು. ಹೊಲದಲ್ಲಿಯ ಆಳು ಹಾಡು ಹಾಡುತ್ತ ತಮ್ಮ ಕೆಲಸವನ್ನು ಸಾಗಿಸಿದ್ದರು.

ಜಾಯಿ ಮಗುವನ್ನು ಹೂವಿನಿಂದ ಶೃಂಗರಿಸುತ್ತಿದ್ದಳು ರಾಮಜಿ ಹೊಲ ನೋಡುತ್ತ ಅತ್ತಿತ್ತ ಅಡ್ಡಾಡುತ್ತಿದ್ದ. ಅವಳ ಹೃದಯದಲ್ಲಿಯು ಆಸೆ ಮತ್ತೆ ಜಾಗೃತವಾಯಿತು. 'ಓಡಿ ಹೋಗಿ ರಾಮಜಿಯ ಭೆಟ್ಟಿ ಆಗಲಾ' ಎಂದು ವಿಚಾರ ಮಾಡುತ್ತಿದ್ದಳು. ಅಷ್ಟರಲ್ಲಿ ಅವನೇ ಆವಳ ಹತ್ತಿರ ಬಂದುಬಿಟ್ಟ.

ರಾಮಜಿ ಸಿಟ್ಟಿನಿಂದ ಜಾಯಿಯನ್ನು ನೋಡಿ "ನೀನು ಆ ಮನೆಗೆ ಹೋದೆ ಅಲ್ಲವೆ? ಅವರಂತೆ ನೀನೂ ಉಪವಾಸ ಬಿದ್ದು ಸಾಯಿ. ನಿಮ್ಮ ಅದೃಷ್ಟದಲ್ಲಿ ಸುಖ ಇಲ್ಲ. ಆದಕ್ಕೆ ನಾನೇನು ಮಾಡಲಿ? ಎಲ್ಲರೂ ಉಪ ವಾಸದಿಂದ ಸಾಯಿರಿ ಮತ್ತು ಈ ಮುದುಕನನ್ನು ತಿನಲಿಕ್ಕೆ ಜೀವಂತ ಇಡಿರಿ" ಎಂದು ನುಡಿದ.

ಮುದುಕನ ಮಾತಿನಲ್ಲಿದ್ದ ನೈರಾಶ್ಯ ಹಾಗೂ ದುಃಖವನ್ನು ಜಾಯಿ ಅರಿ ತಳು. ಅವಳು ರಾಮಜಿಗೆ ಅಂದಳು "ಅಪ್ಪಾ! ನನಗಂತೂ ನಿನ್ನ ಮನೆಯ ಬಾಗಿಲ ಮುಚ್ಚಿತು. ಆದರೆ ಈ ಬಾಲಕನಿಗೇಕೆ ಮುಚ್ಚಬೇಕು? ಮಗುವಿನ ದೇನು ತಪ್ಪು? ಮೋಹನನ ಮಗುವನ್ನು ನೀನು ಬಲವಾಡಿಕೊಳ್ಳುವ ದಿಲ್ಲವೇ? ಮಗು ಏತಕ್ಕೆ ಕಷ್ಟಕ್ಕೆ ಗುರಿಯಾಗಬೇಕು? ಈ ಮಗುವನ್ನು ನೀನು ಕರೆದುಕೊ. ಆದಕ್ಕೆ ಉಣ್ಣೆಯ ಬಟ್ಟೆ ಹಾಕು; ಆಕಳ ಹಾಲು ಕುಡಿಸು. ನೀನು ಹಚ್ಚಿದ ಗಿಡದ ಫಲವು ಅಲ್ಲವೇ ಇದು?"

ರಾಮಜಿ ಆ ಮಾತನ್ನು ಕೇಳಿದ. ಮಗುವನ್ನು ಕಣ್ಣುತುಂಬ ನೋಡಿದ. ಅವನ ಕಣ್ಣು ಹನಿಯೊಡೆದುವು. ಅವು ತೋರಬಾರದೆಂದು ಮುಖ ಅತ್ತ ಮಾಡಿದ. ಕಣ್ಣೀರು ಒರಸಿ ಮತ್ತೆ ಜಾಯಿಯ ಕಡೆಗೆ ಮುಖ ತಿರುವಿದ. ಅವನು ಸುಮ್ಮನಿದ್ದ. ಅವನಿಗೆ ಮಾತನಾಡುವದು ಬೇಡಾ ಗಿತ್ತೋ ಆಥವಾ ಮಾತೇ ಬರುತ್ತಿದ್ದಿಲ್ಲವೋ!

ಜಾಯಿ ಆರ್ತಸ್ವರದಲ್ಲಿ, ಕಲ್ಲನ್ನೂ ಕರುಗಿಸುವ ಸ್ವರದಲ್ಲಿ ಅಂದಳು "ಅಪ್ಪಾ, ಅಪ್ಪಾ ಹಾಗಾದರೆ ಈ ಬಾಲಕನನ್ನು ಎತ್ತಿಕೊ. ತಗೊ, ತಗೊ; ತಗೊ ಈ ಮುದ್ದು ಮಗನನ್ನು."

ರಾಮುಜಿಯ ತುಟಿ ಬೇರೆ ಆದವು. ಆದರೆ ಮಾತು ಹೊರಚ ಲೊಲ್ಲದು. "ತಾ" ಎಂದ. ಜಾಯಿಯ ಮುಖದ ಮೇಲೆ ಕೃತಜ್ಞತೆಯ ಭಾವವು ಅರಳಿತು. ಮಗುವನ್ನು ರಾಮುಜಿಯ ಕೈಯಲ್ಲಿ ಕೊಟ್ಟುಬಿಟ್ಟಳು. ಜಾಯಿಯ ಸೆರಗನ್ನು ಮಗು ಬಿಡಲೊಲ್ಲದು. ಮಗು ಅಳತೊಡಗಿತು. ಆದರೆ ಜಾಯಿ ಮಗುವಿನ ಹಸುಗೈಗಳನ್ನು ಬಿಗಿಸಿದಳು. ರಾಮುಜಿ ಮಗು ವನ್ನು ಆಡಿಸುತ್ತ ಹೋದ.

ಸಂಜೆಯಾಯಿತು. ಹೊಲದಲ್ಲಿಯ ಆಳುಗಳು ದುಡಿಯುವದನ್ನು ನಿಲ್ಲಿಸಿದರು. ಕತ್ತಲೆ ಪಸರಿಸಿತು. ಜಾಯಿ ಅಲ್ಲೆ ಹಾಸುಗಲ್ಲ ಮೇಲೆ ಕುಳಿ ತಿದ್ದಳು. ಮಗುವಿನ ತಲೆಯ ಮೇಲಿಂದ ಅಲ್ಲಿ ಬಿದ್ದ ಹೂವು ಅವಳ ಕೈಯಲ್ಲಿದ್ದವು. ಕಣ್ಣೀರುದುರಿಸುತ್ತ ಇದ್ದಳು. ಅವಳಿಗೆ ತನ್ನ ಜೀವನದ ನೆನಹು ಆಯಿತು. ರಾಮುಜಿ ತನಗೆ ಆಡಿಸಿದ್ದು, ಮೋಹನನ ಮೋಹದ ಮೂರುತಿ, ಅವನ ಕಷ್ಟ, ನಷ್ಟ, ಮರಣ ಎಲ್ಲವೂ ಅವಳ ಕಣ್ಣೆದುರು ನಿಂತವು. ಹೌದು, ನಾನು ದುರ್ದೈವಿ, ನಿಜವಾಗಿಯೂ ದುರ್ದೈವಿ. ದೇವರ ಉದ್ದೇಶವಾದರೂ ಏನಿದೆ? ಆದರೆ ಇಂದಂತೂ ರಾಮುಜಿ ನನ್ನ ಕೈಯೊಳಗಿಂದ ಮಗುವನ್ನು ಕರೆದುಕೊಂಡು ಹೋದ. ಇದಾದರೂದೊಡ್ಡ ಸುದೈವವೆ ನನ್ನದು. ಹೀಗೆ ವಿಚಾರಮಗ್ನಳಾಗಿ ಗುಡಿಸಲ ಕಡೆಗೆ ಹೊರಟಳು.

ಗಜರಾ ಕೆಲಸ ಮಾಡಿ ತಿರುಗಿ ಬಂದು, ನೀರಿನ ಕೊಡ ತುಂಬಿ ಕೊಂಡು ಬಂದಿದ್ದಳು. ಒಲೆಯ ಹತ್ತಿರ ರೊಟ್ಟಿ ಸುಡುತ್ತಿದ್ದಳು. ಅಷ್ಟ ರಲ್ಲಿ ಜಾಯಿ ಬಂದಳು. "ಮಗು ಎಲ್ಲಿ!" ಅಂದಳು ಗಜರಾ. "ಮಗು ವನ್ನು ಅಪ್ಪ ಒಯ್ದ. ಇನ್ನು ಮಗು ಸುಖದಿಂದ ಬಾಳುವದು, ಬೆಳೆ ಯುವದು. ನಾವು ಹೇಗಾದರೂ ಬದುಕುವೆವು. ಇನ್ನು ಮಗುವಿಗೆ ಉಪ ವಾಸದ ಚಿಂತೆ ಇಲ್ಲ" ಎಂದು ಅಂದಳು ಜಾಯಿ.

ಜಾಯಿಯ ಮಾತು ಕೇಳಿ ಅವಳಿಗೆ ಆನಂದವಾಗಲಿಲ್ಲ. ಅವಳ ಚಿಂತಾತುರ ಮುಖ ನೋಡಿ ಜಾಯಿಯ ಮನಸಿಗೆ ವ್ಯಥೆಯಾಯಿತು. ಅವಳು ತಾನು ಮಾಡಿದ್ದು ಕೂಸಿನ ಹಿತಕ್ಕಾಗಿ ಎಂದು ತಿಳಿದಿದ್ದಳು.

ಆದರೆ ಕೂಸಿನ ತಾಯಿಯ ಮನಸಿಗೆ ಅದು ಬರಲಿಲ್ಲ. ತಾಯಿಯ ಕರುಳು ತಾಯಿಗೇ ತಿಳಿಯುವದಲ್ಲವೇ! ಜಾಯಿಗೆ ಈ ಜನ್ಮದಲ್ಲಿ ಇದು ಸಾಧ್ಯವಿದ್ದಿಲ್ಲ. ಎರಡನೆಯವರ ಮಕ್ಕಳನ್ನು ಜೋಪಾನ ಮಾಡಿ ಬರುವಂಥ ಅನುಭವವಲ್ಲ ಇದು.

ಗಜರಾ ಖಿನ್ನಳಾಗಿದ್ದುದನ್ನು ನೋಡಿ ಜಾಯಿಯು ಖಿನ್ನಮುಖಿಯಾದಳು. ರೊಟ್ಟಿಯ ಚೂರೊಂದನ್ನು ತಿಂದು ಇಬ್ಬರೂ ಕಂಬಳಿಯ ಮೇಲೆ ಅಡ್ಡಾದರೂ ನಿದ್ದೆ ಬರಲಿಲ್ಲ. ಕೋಳಿ ಕೂಗಿತು. ಬೆಳಗುಹರಿಯುವ ಸಮಯವಾಯಿತು. ಗಜರಾ ಜಾಯಿಗೆ ಅಂದಳು " ಇಡೀ ರಾತ್ರಿ ನಿದ್ದೆ ಇಲ್ಲ. ನಾನು ವಿಚಾರ ಮಾಡಿದೆ. ಬೇಡ ನನ್ನ ಮಗು ಮಾಮಂದಿರ ಹತ್ತಿರ ಇರುವದು. ನಾವಿಬ್ಬರೂ ಹೋಗಿ ಮಗುವನ್ನು ಕರಕೊಂಡು ಬರುವ." ತಾಯಿಯ ನಿರ್ಧಾರ, ಇಚ್ಛೆ! ಜಾಯಿಗಂತೂ ಇವೆರಡನ್ನು ಮೀರುವದು ಸಾಧ್ಯವಿದ್ದಿಲ್ಲ. ಮಗುವನ್ನು ಬಿಟ್ಟುಬಂದ ಬಳಿಕ ಅವಳ ಜೀವಕ್ಕೂ ಸಮಾಧಾನವಿರಲಿಲ್ಲ. ಇಬ್ಬರೂ ಬೆಳಗಿನ ಹಾದಿ ಕಾಯುತ್ತಿದ್ದರು. ನಿದ್ದೆ ಬರಲೊಲ್ಲದೆಂದು ಬೀಸತೊಡಗಿದರು. ಬೀಸುವ ಪದ ಹಾಡಿದರು. ಗಜರಾ ಮಗುವನ್ನು ಕುರಿತು ಹಾಡಿದಳು. ಅದರ ಭಾವಾರ್ಥ ಹೀಗಿದೆ:– " ತೊಡೆಯ ಮೇಲಿನ ಮಗುವನ್ನು ಅಗಲುವದು ಸಾಧ್ಯವಿದೆಯೋ ? ಹಸು ಇಲ್ಲದೇ ಗೋವು ಅಕುವಿಡಬಹುದೇ ? ಬೇಡ ಬೇಡ ಈ ಅಗಲುವಿಕೆ ನನಗೆ! ನಡೆ ನಡೆ, ಬೇಗ ನಡೆ, ಮಗುವನ್ನು ಭೆಟ್ಟಿ ಮಾಡಿಸು ಸಖಿ." ಅದು ಹೃದಯದ-ಮಾತೃಹೃದಯದ-ಆರ್ತ ಕರೆಯಾಗಿತ್ತು. ಈ ಹಾಡನ್ನು ತಾನೇ ಮಾಡಿದ್ದಳೋ ಏನೋ ?

ಹೊರಗೆ ಬೆಳಕು ಪಸರಿಸಿತ್ತು. ಜನ ತಮ್ಮ ತಮ್ಮ ಉದ್ಯೋಗಕ್ಕೆ ಹೊರಟಿತ್ತು. ಸೂರ್ಯನಾರಾಯಣ ಎಲ್ಲರನ್ನು ಕೆಲಸಕ್ಕೆ ಕರೆಯುತ್ತಿದ್ದ, ಹೂವನ್ನು ಅರಳಿಸಿ ಸೃಷ್ಟಿಯನ್ನೆಲ್ಲ ಸೂಸುತ್ತಿದ್ದ, ಅಲ್ಲಾಡಿಸುತ್ತಿದ್ದ.

ಗಜರಾ, ಜಾಯಿ ಇಬ್ಬರೂ ಹೊರಬಿದ್ದರು. ರಾಮಜಿ ಮನೆಯಲ್ಲಿ ಆರಾಮ ಕುರ್ಚಿಯ ಮೇಲೆ ಕುಳಿತು ಮೊಮ್ಮಗನನ್ನು ಆಡಿಸುತ್ತಿದ್ದ.

ಉಂಡಿಯನ್ನು ಕೊಡುತ್ತಿದ್ದ. ಅವನನ್ನು ಕರೆಯುತ್ತಿದ್ದ. ಬೆಲ್ಲಕ್ಕೆ ಇರುವೆ, ಜೇನುತುಪ್ಪಕ್ಕೆ ಜೇನುನೊಣ ಆಕರ್ಷಿಸುವಂತೆ ಸಿಹಿ ಪದಾರ್ಥ ಕಂಡೊಡನೆ ಚಿಕ್ಕ ಬಾಲಕರು ಧಾವಿಸುತ್ತಾರೆ. ಮೊಮ್ಮಗ ಸಿಹಿ ಉಂಡಿ ತಿನ್ನುತ್ತ ಅಜ್ಜನ ಅಂಗಿ ಗುಂಡಿ ಹಿಡಿದು ಆಡುತ್ತಿದ್ದ.

ಗಜರಾ, ಜಾಯಿ ಇಬ್ಬರು ಬಂದು ಬಾಗಿಲ ಹತ್ತರ ನಿಂತರು. ಬಾಗಿಲ ತೆರೆಯುವ ಧೈರ್ಯವಾಗಲಿಲ್ಲ. ಆದರೆ ಜಾಯಿ ಮುಂದೆ ಬಂದು ಬಾಗಿಲ ತೆರೆದಳು. ಇಬ್ಬರು ಕೇಳದೆ ಒಳಗೆ ಸೇರಿದರು. ಮುದುಕನಿಗೆ ಆಶ್ಚರ್ಯವೆನಿಸಿತು. ಅವನು ಮಾತನಾಡಲಿಲ್ಲ. ಗಜರಾ ಧೈರ್ಯದಿಂದ ಮಾತನಾಡಿದಳು "ಮಾವಂದಿಗೆ! ನಾನು ನನ್ನ ಮಗನನ್ನು ಕರೆದು ಕೊಂಡು ಹೋಗಲು ಬಂದಿದ್ದೇನೆ. ನಿಮ್ಮ ಹತ್ತಿರ ಬೇಡ ಅವ. ನಿಮ್ಮಂತೆ ಕಠೋರಹೃದಯದವನಾಗುವದು, ದುಷ್ಟನಾಗುವದು, ತನ್ನ ತಂದೆ ತಾಯಂದಿರನ್ನು ದೂರುವಂಥವನಾಗುವದು ಬೇಡ. ಬೇಡ. ಕರ್ರಿ ಅವನನ್ನು. ಇಲ್ಲಿ. ಸಿರಿವಂತಿಕೆಯಲ್ಲಿ ಇವನ ಹೃದಯ ಕಠೋರವಾಗದೆ ಇರಲಾರದು. ಬಡತನವು ಅವನ ಮನಸಿನಲ್ಲಿ ಪ್ರೇಮ, ದಯೆ ಮುಂತಾದ ಸದ್ಗುಣಗಳನ್ನು ಬೀರುವದು. ತನ್ನ ತಂದೆಯ ನೆನಹು ಪುಣ್ಯಮಯವೆನಿಸುವದು ಅವನಿಗೆ. ತಾಯಿಯನ್ನು ತುಂಬಾ ಪ್ರೀತಿಸುವನು. ನನ್ನ ಮಗು ಬಡವನಿದ್ದರೂ ಅಡ್ಡಿ ಇಲ್ಲ, ಮನಸಿನ ಸಿರಿ ಅವನಲ್ಲಿ ಮೂಡಿ ಬೆಳೆಯಲಿ. ಕೊಡಿರಿ ಅವನನ್ನು ಇಲ್ಲಿ. ನಾನು ನಿಜವಾಗಿ ಅವನನ್ನು ಕರೆದುಕೊಂಡು ಹೋಗಲು ಬಂದಿದ್ದೇನೆ."

ಗಜರಾ ಆಡಿದ ಮಾತು ಹೆದನವಾದ ಬಾಣಗಳಂತೆ ರಾಮುಜಿಯ ಹೃದಯವನ್ನು ಸೀಳಿಹೋದವು. ಆ ಕಲ್ಲು ಕರುಗಿತು. ಮುದುಕ ಖುರ್ಚಿಯ ಮೇಲಿಂದ ಚಟ್ಟನೆ ಎದ್ದು ಗಜರಾನನ್ನು ಅಪ್ಪಿಕೊಂಡು ಅಳುತ್ತ ಅಂದ "ನನ್ನ ಮುದ್ದಿನ ಮಗಳೇ ಬೇಡ, ನನ್ನನ್ನು ಈ ರೀತಿ ಜರಿಯಬೇಡ, ಕಾಡಬೇಡ. ನನ್ನ ಹೃದಯದಲ್ಲಿದ್ದ ಕಿಚ್ಚನ್ನು ಹೇಗೆ ತೋರಿಸಲಿ ? ನಾನು ದುರಭಿಮಾನಕ್ಕೆ ಬಲಿಬಿದ್ದೆ. ನನ್ನ ಅಹಂಕಾರದ ಮೂಲಕ ಬಂಗಾರದಂಥ ಮಗನನ್ನು ಕಳೆದುಕೊಂಡೆ. ನಾನು ಪುತ್ರಘಾತಕ. ಇನ್ನು ನೀವಿಬ್ಬರು

ನನ್ನಿಂದ ಅಗಲಬೇಡಿರಿ. ಇಲ್ಲಿಯೇ ನೀವು ಇದ್ದು ಮಗುವನ್ನು ಜೋಪಾನ ಮಾಡಬೇಕು. ಮೋಹನನ ಮರಣ ನಮ್ಮನ್ನು ಕೂಡಿಸಿದೆ. ಮೋಹನ ಸತ್ತ, ಅವನೊಡನೆ ನನ್ನ ಅಹಂಕಾರವೂ ಅಳಿಯಿತು. ತನ್ನ ಬಲಿದಾನಮಾಡಿ ನನ್ನ ಮಗ ನನ್ನ ಆತ್ಮವನ್ನು ಶುದ್ಧಮಾಡಿದ್ದಾನೆ. ಆದದ್ದೆಲ್ಲ ಮರೆತುಬಿಟ್ಟು ನನ್ನನ್ನು ಕ್ಷಮಿಸಿರಿ. ಬೇಡ ಅಳಬೇಡ ! ನಾನು ಮಹಾಪರಾಧಿ" ಹೀಗೆಂದು ಮುದುಕ ಅವರೀರ್ವರ ಕಾಲು ಹಿಡಿಯಲು ಬಾಗಿದ.

"ಅಯ್ಯೋ ! ಏನಿದು ಮಾವಂದಿರೆ ! ನೀವು ನಮ್ಮ ಕಾಲು ಹಿಡಿಯುವದೇ? ನಿಮ್ಮ ಮಂಗಲ ಆಶೀರ್ವಾದ ನಮಗಿರಲಿ" ಎಂದು ಗಜರಾ, ಜಾಯಿ ಇಬ್ಬರೂ ರಾಮಜಿಯ ಕಾಲು ಹಿಡಿದರು. ಮಗುವನ್ನು ಅವನ ಕಾಲಮೇಲೆ ಹಾಕಿದರು.

ಅವರೆಲ್ಲರೂ ಹರ್ಷದಿಂದ ಬಾಳತೊಡಗಿದರು. ಜಾಯಿ ಲಗ್ನವಾಗಲಿಲ್ಲ. ರಾಮಜಿ ಅವಳನ್ನು ಮದುವೆಯ ವಿಷಯವಾಗಿ ಎಂದೂ ಮಾತಾಡಿಸಲಿಲ್ಲ. ಗಜರಾ ಸಹ ಆ ವಿಷಯವನ್ನು ಎಂದೂ ಎತ್ತಲಿಲ್ಲ. ಅದೊಂದು ಗಂಭೀರ ಮತ್ತು ಪವಿತ್ರ ವಿಷಯವಾಗಿತ್ತು. ಅದನ್ನೆತ್ತಿ ಮಾತನಾಡುವದೇ ಪಾಪ–ಮಹಾನ್ ಪಾಪ.

ಮೋಹನನ ನೆನಪು ಎಲ್ಲರಿಗೂ ಆಗುತಿತ್ತು. ಎಲ್ಲರ ಕಣ್ಣು ತುಂಬಿ ಬರುತಿದ್ದವು. ಆದರೆ ಮೋಹನನ ಮೋಹಕ ಬಾಲಕ ಕಂಬನಿಗಳನ್ನು ಇಲ್ಲದಂತೆ ಮಾಡುತ್ತಿದ್ದ. ಮನೆಯಲ್ಲಿ ಅವನೊಬ್ಬ ಜಾದುಗಾರ !



# ವೇಣುವಾದಕ

ಒಂದು ಊರಲ್ಲಿ ಒಬ್ಬ ಸಿರಿವಂತನಿದ್ದ. ಸುತ್ತುಮುತ್ತಲಿನ ಊರಲ್ಲೆಲ್ಲ ಅವನ ಭೂಮಿಗಳು ಪಸರಿಸಿದ್ದವು. ಎಲ್ಲಿ ನೋಡಿದಲ್ಲಿ ಅವನ ಹೊಲಗಳೇ ಹೊಲಗಳು, ಮನೆಗಳೇ ಮನೆಗಳು. ಸಾವಿರಾರು ರೈತರ ಮನೆಗಳನ್ನು ಅವನು ಮಾರಿಸಿದ್ದ. ಒಕ್ಕಲರಿಗೆ ಯಮನಾಗಿದ್ದ. ಒಕ್ಕಲಿಗರ ಜಂಗಮ ಆಸ್ತಿಗಳನ್ನು ಜಪ್ತಮಾಡಿಸಿ ಕೋರ್ಟು ಕಚೇರಿಗೆ ತಂಸಿ ಮಾರಿಸುತ್ತಿದ್ದ. ದುಡಿಯುವ ಜನರೆಲ್ಲ ಇವನೆಂದರೆ ಕೆಂಡ ಕಾರುತ್ತಿದ್ದರು. ಬಿಸಿಲು, ಮಳೆ ಗಾಳಿಗಳಲ್ಲಿ ದುಡಿದು ತಯಾರಿಸಿದ ಪೈರನ್ನು ಈ ಸಾಹುಕಾರ ಜಪ್ತಿ ಮಾಡಿಸಿ ಒಯ್ದುಬಿಡುತ್ತಿದ್ದ. ಒಕ್ಕಲಿಗರು, ಅವರ ಮಡದಿ ಮಕ್ಕಳು ಉಪವಾಸ, ಅರೆಹೊಟ್ಟೆ ಇರುತ್ತಿದ್ದರು. ಒಕ್ಕಲಿಗರ ಗೋಳು ಇವನ ಪಾಲು. ಇವನನ್ನು ಕಂಡರೆ "ಶರಣು-ಶರಣು" ಅನ್ನುವರು. ಆದರೆ ಅವನು ಸ್ವಲ್ಪ ದೂರ ಹೋದಕೂಡಲೆ "ಈ ರಾಕ್ಷಸ ಯಾಕೆ ಸಾಯುವದಿಲ್ಲ?" ಎಂದು ನಿಟ್ಟುಸಿರು ಬಿಡುತ್ತಿದ್ದರು.

ಈ ಸಾಹುಕಾರನ ಹೆಸರು ಕಲ್ಲಪ್ಪ. ಅವನ ಮನಸ್ಸು ಅವನ ಹೆಸರಿನಂತೆಯೆ ಇತ್ತು. ಮಮತೆ, ಕರುಣೆ ಎಂಬುದು ಅವನಿಗೆ ಗೊತ್ತೇ ಇದ್ದಿಲ್ಲ. ಕಣ್ಣೀರು ನೋಡಿದರೆ ಅಪಹಾಸ್ಯ ಮಾಡುತ್ತಿದ್ದ. ಕಂಬನಿಯನ್ನು ನೋಡಿ ಅಪಹಾಸ್ಯ ಮಾಡುವದಕ್ಕಿಂತ ಹೆಚ್ಚಿನ ದುರ್ಗುಣ ಯಾವುದಿದೆ ಈ ಜಗತ್ತಿನಲ್ಲಿ? ಕಲ್ಲಪ್ಪನಿಗೆ ಒಂದೇ ವಸ್ತುವಿನ ಬೆಲೆ ಗೊತ್ತು. ಅದೆಂದರೆ ದುಡ್ಡು. ದುಡ್ಡು ಅವನ ದೇವರು.

ಈ ಕಲ್ಲಪ್ಪನಿಗೆ ಒಬ್ಬ ಮಗನಿದ್ದ–ಕಲ್ಲಿದ್ದಲಿ ಕಣಿಯಲ್ಲಿ ವಜ್ರವಿದ್ದಂತೆ, ಮಣ್ಣಿನ ಹೊಟ್ಟೆಯಲ್ಲಿ ಕಸ್ತೂರಿ ಇದ್ದಂತೆ. ಅವನ ಹೆಸರು ಮುದ್ದಣ್ಣ. ಹೆಸರಿನಂತೆ ಅವನು ಎಲ್ಲರಿಗೂ ಪ್ರಿಯನಾಗಿದ್ದ. ಅವನು ನೋಡಲಿಕ್ಕೆ

ಚೆಲುವ. ಅವನ ಮನಸ್ಸು ಬಹಳ ದೊಡ್ಡದು. ಬಡವರ ಕಂಬನಿಯ ಅರ್ಥ ಅವನಿಗೆ ಆಗುತ್ತಿತ್ತು. ರೈತರ ಗೋಳನ್ನು ಅವನು ತನ್ನ ಮನೆಯಲ್ಲಿ ದಿನಾಲು ನೋಡುತ್ತಿದ್ದ. ತನ್ನ ತಂದೆ ಅವರನ್ನು ಜರಿಯುವದನ್ನು ನೋಡಿ ಅವನು ಸಣ್ಣವನಿದ್ದದ್ದರಿಂದ ಸುಮ್ಮನಿರುತ್ತಿದ್ದ. ಆದರೆ ಸಣ್ಣವನಾಗಿ ಉಳಿಯುವನೆಷ್ಟು ದಿನ? ದಿನಾಲು ಬೇರೆ ಬೇರೆ ಆಭರಣ, ಹೊಸ ವಸ್ತ್ರಗಳಿಂದ ಅವನನ್ನು ಶೃಂಗರಿಸುತ್ತಿದ್ದರು.

ಊರಲ್ಲಿ ಅತ್ತಿತ್ತ ಹೋದಾಗ್ಗೆ ಅವನಿಗೆ ತನ್ನ ತಂದೆಯ ನಿಂದೆ ಕೇಳಿ ಬರುತ್ತಿತ್ತು. ಸಾಲೆಯಲ್ಲಿ ಹುಡುಗರು ಅವನನ್ನು ಕಂಡ ಕೂಡಲೆ ಅನ್ನುತ್ತಿದ್ದರು "ಬಡವರನ್ನು ಗೋಳಿಗೆ ಈಡು ಮಾಡುವ ಕಲ್ಲಪ್ಪನ ಮಗ ಬಂದ." ಎಲ್ಲಿಯಾದರೂ ಅಂಗಡಿಗೆ ಅಕಸ್ಮಾತ್ತಾಗಿ ಹೋದಾಗ ಅವನನ್ನು ನೋಡಿ ಜನ ಅನ್ನುತ್ತಿದ್ದರು "ಬಡವರ ಯಮನಾದ ಕಲ್ಲಪ್ಪನ ಮಗ ಬಂದ." ಅವನಿಗೆ ಇದನ್ನು ಕೇಳಿ ಬಹಳ ವ್ಯಸನವಾಗುತ್ತಿತ್ತು. ಅವನು ಬಡವರಂತೆ ಉಡುಪು ಧರಿಸತೊಡಗಿದನು. ಸಾಲೆಬಿಟ್ಟನು. ಬಡವರ ಗೋಳು ಅವನಿಗೆ ಕೇಳಿಸುತ್ತಿತ್ತು. ಒಂದು ದಿನ ಮುದ್ದಣ್ಣನಿಗೆ ಕಲ್ಲಪ್ಪ ಹೇಳಿದ "ಮುದ್ದಣ್ಣ, ನೀನು ಗುಮಾಸ್ತರ ಹತ್ತಿರ ಕುಳಿತು ಜಮಾಖರ್ಚು ಕಲಿ. ಇದೆಲ್ಲ ಆಸ್ತಿಗೆ ಒಡೆಯ ನೀನು. ಎಲ್ಲ ವ್ಯವಹಾರಗಳನ್ನು ಲಕ್ಷ್ಯವಿಟ್ಟು ನೋಡು. ನನ್ನ ಕಂದಾ, ಇದೆಲ್ಲ ನಿನಗಾಗಿಯೇ ಇದೆ." ತಂದೆಯ ಮಾತು ಕೇಳಿ ಮುದ್ದಣ್ಣ ಅಂದ "ಅಪ್ಪಾ! ನನಗೇನೂ ಬೇಡ. ಈ ಎಲ್ಲ ಆಸ್ತಿಯು ನಮ್ಮದೇ!" "ನಮ್ಮದಲ್ಲದೆ ಮತ್ತಾರದು? ನಾನು ಇದನ್ನೆಲ್ಲ ನನ್ನ ವ್ಯವಹಾರ, ಜ್ಞಾನದಿಂದಲೇ ಗಳಿಸಿದ್ದೇನೆ." ಎಂದು ತಂದೆ ಅಂದ. "ಬಡವರನ್ನು ಕಾಡಿ, ಗೋಳಿಗೆ ಈಡು ಮಾಡಿ ಗಳಿಸಿದ್ದೀರಿ" ಎಂದು ಮುದ್ದಣ್ಣ ಅಂದ. "ಸಾಲ ಮಾಡಿದ್ದಾರೆ, ಸಾಲದಲ್ಲಿ ಆಸ್ತಿ ಬಂದಿದೆ. ನನ್ನದೇನು ತಪ್ಪು? ಅವರೇಕೆ ಸಾಲಮಾಡಬೇಕು?" ಎಂದು ತಂದೆ ನುಡಿದ.

ಮುದ್ದಣ್ಣನಿಗೆ ಒಬ್ಬ ಗೆಳತಿ ಇದ್ದಳು. ಚಿಕ್ಕಂದಿನಿಂದಲೇ ಅವರಿಬ್ಬರು ಕೂಡಿ ಆಡಿದ್ದರು. ಅವಳ ಹೆಸರು ಲಲಿತಾ. ಅವಳ ತಂದೆ ಬಡವ.

ಕಲ್ಲಪ್ಪನ ಮಣಕೊ ಇದ್ದನು. ಅವನು ಅಲ್ಲಿಯೇ ಇವರ ನೆರೆಯಲ್ಲಿದ್ದನು. ಮುದ್ದಣ್ಣ-ಲಲಿತಾ ಕೂಡಿ ಆಡುತ್ತಿದ್ದರು. ಜೋಕಾಲಿಯ ಮೇಲೆ ಜೀಕು-ತ್ತಿದ್ದರು. ಒಬ್ಬರನ್ನು ಬಿಟ್ಟು ಮತ್ತೊಬ್ಬರು ಇರುತ್ತಿದ್ದಿಲ್ಲ.

ಆದರೆ ಇತ್ತೀಚೆಗೆ ಮುದ್ದಣ್ಣ ಲಲಿತೆಯ ಮನೆಗೆ ಹೋಗುತ್ತಿದ್ದಿಲ್ಲ. ಅವನು ಸಾಧಾರಣವಾಗಿ ಯಾರಲ್ಲಿಯೂ ಹೋಗುತ್ತಿರಲಿಲ್ಲ. ನದಿಯ ದಂಡೆಯ ಮೇಲೆ ಒಂದು ವಿಸ್ತೀರ್ಣವಾದ ಆಲದ ಮರವಿತ್ತು. ಅಲ್ಲಿ ಕುಳಿತು ಕೊಳಲನ್ನು ಊದುತ್ತಿದ್ದ. ಅವನು ಬಹಳ ಚನ್ನಾಗಿ ಕೊಳಲ-ನ್ನೂದುತ್ತಿದ್ದ. ಅವನ ಕೊಳಲ ದನಿ ಕೇಳಿದರೆ ಗೋಕುಲದ ಕೃಷ್ಣನ ನೆನಪಾಗುತ್ತಿತ್ತು. ಅವನ ಕೊಳಲುಲಿಯನಾಲಿಸಿ ಆಕಳ, ದನ, ಕರು ಗಪ್ಪನೆ ನಿಂತುಬಿಡುತ್ತಿದ್ದವು. ಪಕ್ಷಿಗಳು ಅಲ್ಲಿಯೇ ಗಿಡದ ಟೊಂಗೆಗಳ ಮೇಲೆ ಕುಳಿತು ಕೇಳುತ್ತಿದ್ದವು. ನದಿಯ ನೀರು ತಟಸ್ಥವಾಗಿ ನಿಲ್ಲು ತ್ತಿತ್ತು. ಕಲ್ಲುಗಳಲ್ಲಿ ನೀರು ಒಡೆಯುತ್ತಿತ್ತು. ಬಡವರ ಗೋಳನ್ನೇ ಮಧುರ ಸ್ವರದಿಂದ ಹಾಡುತ್ತಿದ್ದನೋ ಏನೋ! ಜಗತ್ತಿನಲ್ಲಿದ್ದ ಗೋಳು ಕೊಳಲಿನ ಸ್ವರದಿಂದ ಹೊರಸೂಸುತ್ತಿತ್ತು.

ಬೆಳಗಿನಿಂದ ಸಂಜೆಯವರೆಗೆ ಮುದ್ದಣ್ಣ ಆಲದಮರದ ಸುತ್ತ-ಮುತ್ತಲು ಇರುತ್ತಿದ್ದ. ದನಕಾಯುವವರೆಲ್ಲ ಅವನ ಗೆಳೆಯರಾದರು. ಅವರು ಅವನಿಗೆ ರೊಟ್ಟಿ ಉಳ್ಳಾಗಡ್ಡಿ ಕೊಡುತ್ತಿದ್ದರು. ನದಿ ಅವನಿಗೆ ಸ್ವಚ್ಛ ನೀರು ಕೊಡುತ್ತಿತ್ತು. ಒಮ್ಮೊಮ್ಮೆ ಪಕ್ಷಿಗಳು ಚುಂಚಿನಲ್ಲಿ ಹಣ್ಣು ತಂದು ಅವನ ಪಾದದ ಹತ್ತಿರ ಇಡುತ್ತಿದ್ದವು. ಮುದ್ದಣ್ಣ ಸೃಷ್ಟಿಯ ಬಾಲಕನೇ ಆಗಿದ್ದ. ಇಡಿ ಸೃಷ್ಟಿಯೇ ಮುದ್ದು ಮುದ್ದಣ್ಣನನ್ನು ಪ್ರೀತಿಸು ತ್ತಿತ್ತು.

ಮುದ್ದಣ್ಣ ಬಹಳ ದಿವಸ ಲಲಿತೆಯನ್ನು ಕಾಣಲೇ ಇಲ್ಲ. ಲಲಿತಾ ತಾಯಿ ಕೊಟ್ಟ ಸಿಹಿ ಪದಾರ್ಥಗಳನ್ನೆಲ್ಲ ಕೂಡಿ ಇಟ್ಟಿದ್ದಳು. ಮುದ್ದಣ್ಣನ ಜೊತೆಯಲ್ಲಿಯೇ ಅವನ್ನು ತಿನ್ನಬೇಕೆಂದು ಅವಳ ಆಸೆ. ಅವಳು ಅವನನ್ನು ಕಾಣಲು ಆತುರಳಾಗಿದ್ದಳು. ಆದರೆ ಮುದ್ದಣ್ಣ ಬರಲೇ ಇಲ್ಲ.

ಇತ್ತ ಕಲ್ಲಪ್ಪ ಲಲಿತೆಯ ತಂದೆಗೆ ಎಚ್ಚರಿಕೆ ಕೊಟ್ಟಿದ್ದ "ಲಲಿತಾ ಮುದ್ದಣ್ಣನನ್ನು ಕಾಣತಕ್ಕದ್ದಲ್ಲ. ಅವನು ಒಬ್ಬನೇ ಎಷ್ಟು ದಿನ ಆಲದ ಮರದ ಬುಡದಲ್ಲಿ ಇರುತ್ತಾನೋ ಇರಲಿ. ಬೇಸರಾಗಿ ಮನೆಗೆ ಬಂದೇ ಬರುವನು." ಲಲಿತೆಯ ತಂದೆ ಕಲ್ಲಪ್ಪನ ಸಾಲಗಾರ. ಅವನು ಲಲಿತೆಗೂ ಮುದ್ದಣ್ಣನ ಭೆಟ್ಟಿ ಆಗಬೇಡವೆಂದು ಎಚ್ಚರಿಕೆ ಕೊಟ್ಟನು. ಅವಳ ಕಣ್ಣು ನೀರಿನಿಂದ ತುಂಬಿದವು. ಸಾಲಗಾರ ತಂದೆಗೆ ಅವು ಕಾಣಲಿಲ್ಲ. ಕಂಡರೂ ಅವನಿಗೆ ಅದು ರುಚಿಸಲಿಲ್ಲ.

ಒಂದು ದಿನ ಲಲಿತೆಯ ತಂದೆ ಬೇರೊಂದು ಊರಿಗೆ ಹೋಗಿದ್ದ. ತಾಯಿಗೆ ಹೇಳಿ ಅವಳು ಮುದ್ದಣ್ಣನಿದ್ದಲ್ಲಿಗೆ ಹೋದಳು. ಂಗಡ ತಿನಸಿನ ಡಬ್ಬಿ ಒಯ್ದಳು; ನದಿ ಸಮುದ್ರದ ಕಡೆಗೆ ಹೋದಂತೆ, ಕೋಗಿಲೆ ವಸಂತ ಸಿದ್ದಲ್ಲಿಗೆ ಹೋದಂತೆ, ಜೇನು ಹೂವಿನ ಕಡೆಗೆ ಹೋದಂತೆ ಹೋದಳು. ಮುದ್ದಣ್ಣನ ಬೆನ್ನು ಅವಳ ಕಡೆ ಇತ್ತು. ಅವನು ನದಿಯ ಪ್ರವಾಹವನ್ನು ಲಕ್ಷ್ಯಗೊಟ್ಟು ನೋಡುತ್ತಿದ್ದನು. ಲಲಿತಾ ಹಗುರಾಗಿ ಅವನ ಹತ್ತಿರ ಹೋಗಿ ಅವನ ಕಣ್ಣು ಮುಚ್ಚಿದಳು. "ಯಾರವರು? ನನ್ನ ಕಣ್ಣು ಮುಚ್ಚಿ ನನ್ನನ್ನು ಕಾಡಲಿಕ್ಕೆ ಬಂದವರು ?" ಎಂದು ಮುದ್ದಣ್ಣ ಚಟ್ಟನೆ ಚೀರಿ ಅವಳ ಕೋಮಲವಾದ ಕರಗಳನ್ನು ಹಿಚುಕಿದನು. ಲಲಿತಾ ಅಂಜಿ ಜಿಂಕೆಯಂತೆ ಓಡಿದಳು. ಮುದ್ದಣ್ಣನಿಗೆ ಅಂಜಿದ್ದು ಇದೇ ಮೊದಲನೆ ಸಾರೆ.

ಮುದ್ದಣ್ಣ ತಿರುಗಿ ನೋಡಿದ. ಲಲಿತಾ ಓಡುತ್ತಿದ್ದಳು. "ಲಲಿತಾ, ಲಲಿತಾ! ಓ ಲಲಿತಾ" ಎಂದು ಕೂಗಿದ. ಅವಳು ತಿರುಗಲಿಲ್ಲ ಅವನಿಗೆ ಬಹಳ ವ್ಯಸನವಾಯಿತು. ಓಡಿ ಹೋಗಿ ಅವಳನ್ನು ಕರೆದುಕೊಂಡು ಬರಲಾ? ಕೊಳಲು ಬಾರಿಸಿ ತೋರಿಸಲಾ? ಅವಳೊಡನೆ ಮಾತನಾಡಲಾ? ಎಂದು ಯೋಚಿಸಿದ. ಆದರೆ ಧೈರ್ಯ ಸಾಲಲಿಲ್ಲ.

ಕೆಲದಿನ ಹೀಗೆ ಸಾಗಿದವು. ಮುದ್ದಣ್ಣ ಕರೆದಾಗ ತಾನು ಹೋಗಲಿಲ್ಲ ಎಂಬಮಾತು ಲಲಿತೆಗೆ ಚುಚ್ಚುತ್ತಿತ್ತು. ಅವಳಿಗೆ ಬಂದ ಸಿಟ್ಟು ಹೋಯಿತು. ಪ್ರೇಮವು ಸಿಟ್ಟಿಗೇಳಬೇಕೆ? ಅವಳು ಇನ್ನೊಂದು ಸಂಧಿ

ಒಪ್ಪಿಸಿಕೊಂಡಳು. ಮುದ್ದಣ್ಣನಿಗಾಗಿ ತಿನಸಿನ ಪದಾರ್ಥ ತೆಗೆದುಕೊಂಡು ಹೋದಳು. ಲಲಿತೆ ಓಡಿಹೋದ ದಿವಸದಿಂದ ಮುದ್ದಣ್ಣ ಊರ ಕಡೆಗೆ ಮುಖ ಮಾಡಿ ಕೂಡುತ್ತಿದ್ದ. ಲಲಿತೆ ಬಂದರೆ ಅವಳನ್ನು ನೋಡಬೇಕೆಂಬ ಆಸೆ ಅವನಿಗೆ. ಆದರೆ ಅವಳು ಬಹು ದಿವಸ ಬರಲೇ ಇಲ್ಲ. ಈ ದಿನ ಲಲಿತೆ ಬರುವದನ್ನು ಕಂಡ. ಅವನಿಗೆ ಬಹಳ ಆನಂದವಾಯಿತು. ಪ್ರೀತಿ ಮತ್ತೆ ಬಂದಿತು, ಸ್ನೇಹ ತಿರುಗಿ ಬಂದಿತು.

“ ಲಲಿತಾ, ಎಷ್ಟು ಸಿಡಿವಿನಿಂದ ಓಡಿ ಹೋದೆ ಆ ದಿವಸ? ನಾನು ನಿನ್ನನ್ನು ಎಷ್ಟು ಬಾರಿ ಬಾ ಎಂದು ಕೂಗಿದೆ ಆ ದಿನ ” ಎಂದು ಮುದ್ದಣ್ಣ ಅಂದ.

ಲಲಿತಾ— ನೀನು ಒಮ್ಮೆಲೆ ನನ್ನ ಮೇಲೆ ಹರಿಹಾಯ್ದೆಯಲ್ಲ?

ಮುದ್ದಣ್ಣ— ನೀನು ಕಣ್ಣು ಮುಚ್ಚಿದಿ ಎಂಬುದನ್ನು ನಾನ್ಹೇಗೆ ತಿಳಿಯಬೇಕು?

ಲಲಿತಾ— ಕಣ್ಣು ಮುಚ್ಚಾಟದಲ್ಲಿ ಇದೇ ಕೈಯಿಂದಲ್ಲವೆ ನಾನು ನಿನ್ನ ಕಣ್ಣು ಮುಚ್ಚುತ್ತಿದ್ದುದು? ಆ ಕೈಯ ಗುರುತು ಸಿಗಲಿಲ್ಲವೇ ನಿನಗೆ?

ಮುದ್ದಣ್ಣ— ಆದರೆ ಇತ್ತೀಚೆಗೆ ನಾವು ಆ ಆಟವನ್ನೇ ಆಡಿಲ್ಲ. ನಾನು ಚಿಂತೆಯಲ್ಲಿ ಇದ್ದೆ. ಮನಸ್ಸಿಗೆ ಬಹಳ ತ್ರಾಸವೂ ಆಗಿತ್ತು. ನಿನ್ನ ನಲುಮೆಗೆ ನನ್ನ ಸಿಟ್ಟಿನ ಎರಡು ಶಬ್ದಗಳೂ ಸಹನವಾಗಲಿಲ್ಲವೇ? ಒಂದು ಶಬ್ದದಿಂದ ಸ್ನೇಹವು ಅಳಿಯಿತೇ? ಇಂಥ ದುರ್ಬಲ ಗೆಳೆತನವಿದ್ದರೇನು ಪ್ರಯೋಜನ? ಗೆಳೆತನ ವಜ್ರದಂತಿರಬೇಕು, ಕಾಜಿನಂತೆ ಅಲ್ಲ. ಎಷ್ಟು ಪೆಟ್ಟು ಬಡಿದರೂ ಒಡೆಯದಂತಿರಬೇಕು “ ನೋಡು, ತಾಯಿ ನನಗೆ ಕೊಟ್ಟ ಈ ಮಿಠಾಯಿಯನ್ನು ನಾನು ಹಾಗೆಯೆ ಕೂಡಿಸಿಟ್ಟಿದ್ದೇನೆ. ಬಾ. ಮುದ್ದಣ್ಣ, ನಾನೂ ನೀನೂ ಕೂಡಿಯೆ ತಿನ್ನೋಣ ” ಎಂದಳು ಲಲಿತೆ.

ಇಬ್ಬರೂ ಕೂಡಿ ಮಿಠಾಯಿ ತಿಂದರು. ನದಿಯ ನೀರು ಕುಡಿದರು.

"ಮುದ್ದಣ್ಣ, ಮನೆಗೇಕೆ ಬರುವದಿಲ್ಲ? ಹಿರಿಯರ ಮಾತು ಕೇಳಬೇಕು. ನಿಮ್ಮಪ್ಪ ನಿನ್ನನ್ನು ಕಾಣಬಾರದೆಂದು ಎಚ್ಚರಿಕೆ ಕೊಟ್ಟಿದ್ದನು. ಒಬ್ಬನೇ ಬೇಸತ್ತು ತಿರುಗಿ ಬರಲಿ ಎಂದೆನ್ನುತ್ತಾನೆ. ನಡೆ ಮನೆಗೆ. ನಾನೂ ನೀನೂ ಆಡೋಣ, ಮಾತಾಡೋಣ" ಎಂದಳು ಲಲಿತೆ.

ಮುದ್ದಣ್ಣ:— ಇಡಿ ಊರು ನಮ್ಮಪ್ಪನನ್ನು ತೆಗಳುತ್ತದೆ, ದೂರುತ್ತದೆ. ನನ್ನನ್ನು ಎಲ್ಲರೂ ದೂರಬೇಕೆಂದು ನಿನಗೆ ಅನಿಸುತ್ತಿದೆಯೇನು? ನನ್ನ ಮನೆಯಲ್ಲಿರುವುದು ನನ್ನಿಂದ ಸಾಧ್ಯವಿಲ್ಲ. ಅಲ್ಲಿ ಪಾಪ, ಅನ್ಯಾಯ ತುಂಬಿವೆ. ಬಡವರ ಗೋಳು ಹಗಲಿರಳು ನನ್ನ ಕಿವಿಯಲ್ಲಿ ಕೇಳಬರುತ್ತದೆ. ನಿನ್ನ ಮುದ್ದಣ್ಣನ ಜೀವ ಅಲ್ಲಿ ಗೋಳಿಗೀಡಾಗುತ್ತದೆ ಉಸಿರು ಕಟ್ಟಿದಂತೆ ಆಗುತ್ತದೆ. ಈ ನಿನ್ನ ಹಕ್ಕಿ ಈ ಬಯಲಿನಲ್ಲೇ ಜೀವಿಸುವದು. ಪವಿತ್ರವಾದ, ಪ್ರೇಮಮಯವಾದ ವಾತಾವರಣದಲ್ಲೇ ಉಳಿಯುವದು ಇದು ಮಾತ್ರ ಸಾಧ್ಯ." ಬಳಿಕ ಮುದ್ದಣ್ಣ ಕೊಳಲು ನುಡಿಸಿದ ಲಲಿತೆ ಮರುಳಾದಳು. ಕಣ್ಣು ಮುಚ್ಚಿ ಕುಳಿತಿದ್ದಳು. ಕೊಳಲು ಊದುವನ್ನು ನಿಲ್ಲಿಸಿದರೂ ಅವಳು ಆ ಸಮಾಧಿ ಸ್ಥಿತಿಯಲ್ಲಿಯೇ ಇದ್ದಳು. ಸ್ವಲ್ಪ ಹೊತ್ತಿನಲ್ಲಿ ಅವಳು ಎಚ್ಚತ್ತಳು. ಗದ್ಗದ ಕಂಠದಿಂದ ಮುದ್ದಣ್ಣನಿಗೆ ಅಂದಳು "ಮುದ್ದಣ್ಣ, ನಾನು ನಮ್ಮ ತಂದೆಯ ಕಣ್ಣು ತಪ್ಪಿಸಿ ದಿನಾಲು ಬರುವೆ. ನನಗೆ ಕೊಳಲು ಬಾರಿಸಲು ಕಲಿಸು." "ನೀನು ಬಾ. ನಾನು ಇನ್ನೊಂದು ಕೊಳಲು ತಯಾರಿಸುತ್ತೇನೆ" ಎಂದು ಅಂದ ಮುದ್ದಣ್ಣ.

ಲಲಿತೆ ಮನೆಗೆ ಹೋದಳು. ಮನೆಯಲ್ಲಿ ಕೊಳಲು ಬಾರಿಸುವ ಅಭ್ಯಾಸ ಮಾಡುತ್ತಿದ್ದಳು. "ಏನಿದು ನಿನ್ನ ಕಿಟ ಕಿಟ" ಎಂದು ತಾಯಿ ಸಿಟ್ಟಿಗೆದ್ದು ಅವಳಿಗೆ ಅನ್ನುವಳು. "ಹೌದು ತಾಯಿ, ಮಾವಿನಕಾಯಿ ಹುಳಿ ಇರುತ್ತದೆ. ಆದರೆ ಅದೇ ಕೆಲವು ದಿನಗಳಾಗಿ ಹಣ್ಣಾಯಿತೆಂದರೆ ಸವಿಯಾಗುತ್ತದೆ. ನಾನು ಬಾರಿಸುವದು ಇಂದು ನಿನಗೆ ಕಿಟ ಕಿಟಯೆನಿಸುತ್ತದೆ. ಆದರೆ, ನಾನು ಕೊಳಲು ನುಡಿಸಲು ಕಲಿತೊಡನೆ ನೀನೇ ನನಗೆ 'ಲಲಿತಾ, ಕೊಳಲು ಬಾರಿಸು, ಎಂದೆನ್ನುವಿ. ಮುದ್ದಣ್ಣನ ಕೊಳಲು

ಕೇಳಿ ನದಿಯ ಪ್ರವಾಹ ನಿಲ್ಲುತ್ತದೆ, ಕಲ್ಲು ಕರುಗುತ್ತವೆ." ಎಂದು ಲಲಿತಾ ಉತ್ತರವೀಯುವಳು.

ಒಂದು ದಿನ ಲಲಿತಾ ಮುದ್ದಣ್ಣನ ಕಡೆಗೆ ಹೋಗಿದ್ದಳು. ಅಂದು ಅವಳು ಅವನ ಕೊಳಲನ್ನು ತಕ್ಕೊಂಡು ಬಾರಿಸಿದಳು. ಮುದ್ದಣ್ಣ ಧ್ಯಾನಸ್ಥನಾದನು. "ನನಗಿಂತ ನೀನೆ ಉತ್ತಮವಾಗಿ ಕೊಳಲು ಬಾರಿಸಿದಿ" ಎಂದು, ನುಡಿದನವ "ಇಂದು ನಿನ್ನ ಕೋಮಲ ಹಸ್ತದಿಂದ ಹೃದಯದಲ್ಲಿದ್ದ ಪ್ರೇಮಭಾವನ್ನೆಲ್ಲ ಅದರಲ್ಲಿ ಸುರಿಸಿದಿ. ಆದ್ದರಿಂದಲೇ ನಿನ್ನ ಕೊಳಲೊಳಗಿಂದು ದಿವ್ಯಸಂಗೀತ ಮೂಡಿದೆ ತಾಳ್ಮೆ, ಪಾವಿತ್ರ್ಯ, ಪ್ರೀತಿ, ಕೋಮಲತೆ ಇವುಗಳೆಲ್ಲ ಸ್ತ್ರೀ ಜೀವನದಲ್ಲಿಯೇ ಸಾಧ್ಯ. ಆದ್ದರಿಂದಲೆ ನೀನು ಇಷ್ಟು ಮನೋವೇಧಕ ರೀತಿಯಲ್ಲಿ ಕೊಳಲ ನುಡಿಸಿದಿ."

ಹೀಗೆ ನಡೆದಿತ್ತು ಅವರ ಜೀವನ. ಲಲಿತೆ ಒಂದು ದಿನ ವಿಚಾರ ಮಾಡಿದಳು:– ಮುದ್ದಣ್ಣನ ಕೊಳಲು ಬಹಳ ಸರಸವಿದೆ. ನಾನು ಕೇಳಿದರೆ ಅವನು ಕೊಡದೆ ಇರಲಾರ. ಪ್ರೀತಿಗಾಗಿ ಪ್ರಾಣವನ್ನಾದರೂ ಕೊಡುತ್ತಾರೆ. ಅಂದಮೇಲೆ ಬಿದಿರಿನ ಕೊಳಲನ್ನು ಕೊಡಲಿಕ್ಕಿಲ್ಲವೇ? ಹೀಗೆ ವಿಚಾರ ಮಾಡುತ್ತ ಅವಳು ಮುದ್ದಣ್ಣನ ಕಡೆಗೆ ಹೋದಳು.

ಮುದ್ದಣ್ಣ ಖಿನ್ನನಾಗಿ ಕೂತಿದ್ದ; ಅವನ ಮನಸ್ಸು ಪ್ರಸನ್ನವಿರಲಿಲ್ಲ; ಮನಸ್ಸಿಗೆ ತ್ರಾಸವಾಗಿತ್ತು. ಲಲಿತೆ ಅವನ ಹತ್ತಿರ ಹೋದಳು. ಅವನು ನಗಲಿಲ್ಲ ಅವಳನ್ನು ನೋಡಿ. ಅವನ ಕೊಳಲನ್ನು ಕೈಯಲ್ಲಿ ಹಿಡಿದು ಅಂದಳು "ಮುದ್ದಣ್ಣ, ಈ ಕೊಳಲನ್ನು ನನಗೆ ಕೊಡುತ್ತೀಯಾ? ನೀನು ನನ್ನ ಕೊಳಲು ತೆಗೆದುಕೊ ಮತ್ತು ನಾನು ನಿನ್ನದನ್ನು ತೆಗೆದುಕೊಳ್ಳುವೆ. ನನ್ನ ಕೊಳಲನ್ನು ನೀನು ಊದು, ನಿನ್ನದನ್ನು ನಾನು ಊದುವೆ. ಅಂದರೆ ನಾನು ನಿನ್ನ ಹತ್ತಿರ ಇದ್ದಂತೆ, ನೀನು ನನ್ನ ಹತ್ತರಇದ್ದಂತೆ ಆಗುವದು."

ಮುದ್ದಣ್ಣ ಒಮ್ಮೆಲೆ ರೇಗಿಗೆದ್ದ. ಅವಳ ಮೈಮೇಲೆ ಹರಿಹಾಯ್ದು ಅಂದ "ಮೋಸಗಾರ್ತಿ, ನನಗಿರುವ ಒಬ್ಬಳೇ ಒಬ್ಬಳಾದ ಗೆಳತಿ

ಯನ್ನು ಓಡಿಸಬೇಕೆಂದು ಬಂದೆಯಾ ಇಲ್ಲಿ ? ಇದೊಂದು ನನ್ನ ಆನಂದ. ಇದನ್ನು ಕಸಿದುಕೊಳ್ಳಬೇಕೆನ್ನುತ್ತೀಯಾ ? ಇದಕ್ಕಾಗಿಯೇ ಇಷ್ಟು ದಿನ ಇಲ್ಲಿ ಬಂದು ನನ್ನೊಡನೆ ಸ್ನೇಹ ಮಾಡಿದೆಯಾ ? ಇದೆಲ್ಲ ನಮ್ಮ ತಂದೆಯ ಒಳಸಂಚು ಇರಬೇಕು. ಯಾವ ಕೊಳಲಿನ ಮೂಲಕ ಜೀವನ ನನಗೆ ಬೇಸರವೆನಿಸುವದಿಲ್ಲವೋ ಅದನ್ನೇ ಕಸಿದುಕೊಂಡರಾಯಿತು ಎಂದು ತಿಳಿದು ನನ್ನ ತಂದೆಯೇ ನಿನ್ನನ್ನು ಕಳಿಸಿದ್ದಾನೆ. ಬೇಡ, ಬೇಡ, ನಿನ್ನ ದರ್ಶನ ನನಗೆ. ಇಂಥ ಸ್ವಾರ್ಥಪರಾಯಣ ಮತ್ತು ಮತ್ಸರಯುಕ್ತ ಜಗತ್ತಿನ ದರ್ಶನವೇ ಬೇಡ ನನಗೆ."

ಹೂವಿನ ಮೇಲೆ ಕೆಂಡ ಬಿದ್ದ ಹಾಗೆ ಲಲಿತೆಗೆನಿಸಿತು. ಮುದ್ದಣ್ಣನ ಮೇಲೆ ಅವಳ ಪ್ರೀತಿ ಬಹಳ. ಪ್ರೇಮಪೂರಿತಳಾಗಿ ಅವಳು ಕೊಳಲನ್ನು ಬೇಡಿದ್ದಳು, ಕಣ್ಣೀರು ಸುರಿಸುತ್ತ ಅವಳು ಹೋಗಿಬಿಟ್ಟಳು.

ಲಲಿತೆ ಈಗ ಬೆಳೆದಿದ್ದಳು. ಅವಳ ಮದುವೆಯ ವಿಚಾರ ಮನೆಯಲ್ಲಿ ನಡೆದಿತ್ತು. ಈಗ ಅವಳು ಎಲ್ಲಿಯೂ ಹೊರಗೆ ಹೋಗುತ್ತಿಲ್ಲ. "ಏನು ಲಲಿತೆ ! ಏನಿದು, ಇತ್ತೀಚೆಗೆ ನೀನು ಕೊಳಲೂದುವದನ್ನು ಬಿಟ್ಟುಬಿಟ್ಟಿಯಲ್ಲ. ಎಷ್ಟು ಮಧುರವಾಗಿ ಸರಾಗವಾಗಿ ಊದುತ್ತಿದ್ದೆ" ಎಂದು ಅವಳ ತಾಯಿ ಅಂದಳು.

ಲಲಿತೆ :— ನನ್ನ ಕೊಳಲು ಕೆಟ್ಟಿದೆ, ಒಡೆದಿದೆ. ಈ ಜನ್ಮದಲ್ಲಿಯಂತೂ ನನ್ನ ಕೊಳಲೊಳಗಿಂದ ಮಧುರ ಸಂಗೀತ ಹೊರಬೀಳುವದು ಸಾಧ್ಯವಿಲ್ಲ. ಅದನ್ನು ಸರಿಪಡಿಸುವವರಾರು ? ಅದನ್ನು ಸರಿಪಡಿಸುವವ ಒಬ್ಬನೇ ಇದ್ದಾನೆ; ಆದರೆ ಅವನು ಭೆಟ್ಟಿಯಾಗುವದು ಸಾಧ್ಯವಿಲ್ಲ.

ದೂರವಿದ್ದ ಒಂದು ಊರಿನ ಒಬ್ಬ ತರುಣನೊಡನೆ ಲಲಿತೆಯ ಮದುವೆ ಗೊತ್ತಾಯಿತು. ಮದುವೆ ಆಯಿತು. ರಾತ್ರಿ ಊರ ಹೊರಗಿದ್ದ ಗುಡಿಗೆ ಮೆರವಣಿಗೆ ಹೊರಟಿತು. ಬಜಂತ್ರಿ ಊದುತ್ತಿದ್ದರು. ಆ ಗುಡಿಯ ಹತ್ತಿರದ ಆಲದ ಮರದ ಮೇಲೆ ಕುಳಿತು ಮುದ್ದಣ್ಣ ಕೊಳಲು ಊದುತ್ತಿದ್ದ.

ಕೊಳಲು ಕೇಳಿ ಬಜಂತ್ರಿಯವರು ತಮ್ಮ ವಾದ್ಯ ಊದುವದನ್ನು ನಿಲ್ಲಿಸಿದರು. ಆ ಸ್ವರ ಕೇಳಿ ಲಲಿತೆ ಕಣ್ಣೀರು ಸುರಿಸತೊಡಗಿದಳು. ಯಾರೋ ಕೇಳಿದರು "ಲಲಿತೆ ಅಳುವದೇಕೆ?" "ಇಲ್ಲ, ಕಣ್ಣಲ್ಲಿ ಏನೋ ಹೋಗಿತ್ತು" ಎಂದಂದಳು ಲಲಿತೆ.

ಲಲಿತೆ ಗಂಡನ ಮನೆಗೆ ಹೋದಳು. ಮುದ್ದಣ್ಣ ಕೊಳಲು ಊದು ವದನ್ನೇ ಬಿಟ್ಟ. "ಏನು ಮುದ್ದಣ್ಣ, ಕೊಳಲು ಬಾರಿಸುವದಿಲ್ಲೇಕೆ?" ಎಂದು ದನಕಾಯುವ ಹುಡುಗರು ಕೇಳುತ್ತಿದ್ದರು. ಕಂಬನಿ ತುಂಬಿದ ಮುದ್ದಣ್ಣನ ಕಣ್ಣು ನೋಡಿ ಖಿನ್ನರಾಗಿ ಅವರು ಹೋಗುತ್ತಿದ್ದರು. ಮುದ್ದಣ್ಣ ಜೀವಂತ ಇದ್ದೂ ಸತ್ತ ಹಾಗೆಯೇ ಇದ್ದ. ಜೀವನದಲ್ಲಿಯ ಸ್ವಾರಸ್ಯವೇ ಹೋದಂತಾಯಿತೋ ಏನೋ ಅವನಿಗೆ!

ಲಲಿತೆಯ ಮನಸ್ಥಿತಿಯು ಸಹ ಹೀಗೆಯೇ ಆಗಿತ್ತು. ಬೆಳಗಿನಿಂದ ರಾತ್ರಿಯ ವರೆಗೆ ಎಲ್ಲ ಕೆಲಸಗಳನ್ನು— ಕಸ ತೆಗೆಯುವದು, ಬೀಸುವದು, ಒಗೆಯುವದು, ಅಡಿಗೆ ಮಾಡುವದು, ನೀರು ತುಂಬುವದು— ಅವಳೇ ಮಾಡುತ್ತಿದ್ದಳು. ಯಾರೂ ಇಲ್ಲದಾಗ ಕೆರೆಗೆ ಹೋಗಿ ಬಟ್ಟೆ ಒಗೆಯುತ್ತಿ ದ್ದಳು. ಆಗ ಅಲ್ಲಿ ಕುಳಿತು ಅಳುವಳು. ತನ್ನ ಹೃದಯದೊಳಗಿನ ನೀರ ನ್ನೆಲ್ಲ ಅಲ್ಲಿ ಸುರಿಸುವಳು. ಪ್ರಪಂಚದ ಭಾರವೆಲ್ಲ ಅವಳ ಮೇಲೆ.

ಹೀಗೆ ಕೆಲವು ತಿಂಗಳ ನಡೆಯಿತು. ಕಷ್ಟ ಮಾಡುವ ಜೀವವಿದ್ದಿಲ್ಲ ಅವಳದು. ಈ ಭಾರ ಅವಳಿಗೆ ಸಹಿಸಲಾರದಷ್ಟಾಯಿತು. ಲಲಿತಮ್ಮನ ಹೂವು ಬಾಡಿತು. ಅವಳಿಗೆ ಊಟ ಹೋಗುತ್ತಿದ್ದಿಲ್ಲ. ಮುದ್ದಣ್ಣನನ್ನು ತಾನು ತಿರುಗಿ ಭೆಟ್ಟಿಯೇ ಆಗಲಿಲ್ಲವಲ್ಲ ಎಂಬ ಮಾತು ಅವಳ ಹೃದಯ ವನ್ನು ಕಟಿಯುತ್ತಿತ್ತು. ಅವನಿಗೆ ಯಾರಿದ್ದಾರೆ ಈ ವಿಶಾಲವಾದ ವಿಶ್ವ ದಲ್ಲಿ? ನದಿ ಅವನಿಗೆ ತಾಯಿ. ಪಶುಪಕ್ಷಿ ಅವನಿಗೆ ಅಣ್ಣತಮ್ಮಂದಿರು. ದನಕಾಯುವವರು ಅವನ ಗೆಳೆಯರು. ವ್ಯಥೆಗೆ ಒಳಪಟ್ಟ ಅವನ ಮನಸಿನ ಶಬ್ದಗಳನ್ನು ನಾನು ಮನಸಿಗೆ ಏಕೆ ಹಚ್ಚಿಕೊಳ್ಳಬೇಕಾಗಿತ್ತು? ನಿಜವಾದ

ಪ್ರೇಮ ನಿರಹಂಕಾರಿಯಾಗಿರಬೇಕು. ಈ ರೀತಿ ವಿಚಾರಗಳು ಅವಳ ಮನಸ್ಸಿಗೆ ತೊಂದರೆ ಕೊಡುತ್ತಿದ್ದವು. ಅಳುವು ಒಂದೇ ಅವಳ ಗೆಳತಿ.

ಲಲಿತೆ ಬೇನೆ ಬಿದ್ದಳು. ಹಾಸುಗೆಯ ಮೇಲೆಯೇ ಇದ್ದಳು. ಅವಳ ಮಾವ ಅವಳನ್ನು ತವರಮನೆಗೆ ಕಳುಹಿದ. ಬೇನೆಯಿಂದ ಬಳಲುವ ಸೊಸೆಯ ಪ್ರಯೋಜನವೇನು ಅತ್ತೆಗೆ? ಉಪಯೋಗವಿಲ್ಲದ ವಸ್ತುವಾಗಿದ್ದಳು ಲಲಿತೆ.

ಲಲಿತೆಯ ಈ ಬಾಳು ಕಂಡು ಅವಳ ತಂದೆ ತಾಯಿ ಮರುಗಿದರು. ದಿನ ದಿನಕ್ಕೆ ಅವಳ ಸ್ಥಿತಿ ಕೆಡುತ್ತಿತ್ತು. ಒಂದು ದಿನ ಲಲಿತೆ ತಾಯಿಗೆ ಹೇಳಿದಳು "ಅಮ್ಮಾ! ಮುದ್ದಣ್ಣನನ್ನು ಇಲ್ಲಿ ಕರಕೊಂಡು ಬಾ. ಸಾಯುವ ಮೊದಲು ಒಮ್ಮೆ ಅವನನ್ನು ಕಣ್ಣು ತುಂಬ ನೋಡುತ್ತೇನೆ ಅವನ ಹಸಿವೇ ಹಸಿವು ನನಗೆ. ಹಾಲು ಬೇಡ, ಏನೂ ಬೇಡ ಅಮ್ಮಾ ಅವನನ್ನು ಕರೆಯಿಸುವಿಯಾ!" ಆದರೆ ಅವನನ್ನು ಕರೆಯುವವರಾರು? ಅವಳ ತಾಯಿತಂದೆಗೆ ಯಾರೂ ಮುದ್ದಣ್ಣನ ಸಂಗಡ ಮಾತನಾಡಕೂಡದಲ್ಲವೆಂದು ಕಲ್ಲಪ್ಪನ ಕಟ್ಟಪ್ಪಣೆ ಇತ್ತು. ಲಲಿತೆಯ ತಾಯಿತಂದೆಗೆ ತಮ್ಮ ಮಗಳ ಅಂತ್ಯೇಚ್ಛೆಯಕಿಂತ ಸಾವುಕಾರನ ಮಹತ್ವವೇ ಹೆಚ್ಚಾಗಿತ್ತು.

ಲಲಿತೆ "ಮುದ್ದಣ್ಣ ಮುದ್ದಣ್ಣ" ಅನ್ನುತ್ತ ಪ್ರಾಣಬಿಟ್ಟಳು. "ಯಾರ ಹೆಣವಿದು?" ಎಂದು ದನಕಾಯುವ ಹುಡುಗರಿಗೆ ಮುದ್ದಣ್ಣ ಕೇಳಿದ. "ಲಲಿತೆಯದು" ಎಂದು ಹೇಳಿದರು ಸಿಡಿಲು ಬಡಿದಂತಾಯಿತು ಅವನಿಗೆ. ವಿಲಕ್ಷಣ ದೃಷ್ಟಿಯಿಂದ ನೋಡತೊಡಗಿದ. ಆಲದ ಮರದ ಬುಡದಲ್ಲಿ ನಿಂತಿದ್ದ ಲಲಿತೆಯ ಚಿತೆ ಉರಿಯುತ್ತಿತ್ತು ಮುದ್ದಣ್ಣನ ಹೃದಯ ಚೂರು ಚೂರಾಗತೊಡಗಿತ್ತು.

ಜನರೆಲ್ಲ ಸ್ಮಶಾನದಿಂದ ಹಿಂತಿರುಗಿದರು. ಮುದ್ದಣ್ಣ ತನ್ನ ಕೊಳಲನ್ನು ಕೈಯಲ್ಲಿ ಹಿಡಿದು ಲಲಿತೆಯ ಚಿತೆಯ ಹತ್ತಿರ ಬಂದು ನಿಂತ.

ಇನ್ನೂ ಅದು ಧಗ ಧಗ ಉರಿಯುತ್ತಿತ್ತು. ತನ್ನ ಮತ್ತು ಲಲಿತೆಯ ಮನೋರಥ, ಆಶೆ ಆಕಾಂಕ್ಷೆಗಳು ಉರಿಯುವಂತೆ ಕಂಡವು ಅವನಿಗೆ. ಚಿತೆಗೆ ನಮಸ್ಕಾರ ಮಾಡುತ್ತಿದ್ದ, ಪ್ರದಕ್ಷಿಣೆ ಹಾಕುತ್ತಿದ್ದ, ಮತ್ತೆ ಕೂತು ಅಳುತ್ತಿದ್ದ.

ಮುದ್ದಣ್ಣ ಪುನಃ ಮತ್ತೆ ಯಾರ ಕಣ್ಣಿಗೂ ಬೀಳಲಿಲ್ಲ. ಅವನು ಎಲ್ಲಿಗೆಹೋದನೆಂಬುದು ಯಾರಿಗೂ ತಿಳಿಯಲಿಲ್ಲ. ಲಲಿತೆಯ ನಂದಿದ ಚಿತೆಯ ಮೇಲೆ ಅವನ ಕೊಳಲು ಮಾತ್ರ ಇತ್ತು! ಆದರೆ ಕೊಳಲು ಊದುವವನು ಯಾರಿಗೂ ಕಾಣಲಿಲ್ಲ. ಅವನು ಹೋದದ್ದೆಲ್ಲಿ? ಗಾಳಿಗೆ ಗೊತ್ತು, ತಾರೆಗಳಿಗೆ ಗೊತ್ತು, ಆಳವಾಗಿ ಹರಿಯುವ ನದಿಗೇ ಗೊತ್ತು!

ಇಷ್ಟು ಮಾತ್ರ ನಿಜ. ರಾತ್ರಿಯಾದ ಕೂಡಲೆ ನದಿಯ ದಂಡೆಯ ಮೇಲೆ ಕೊಳಲಿನ ಎರಡು ದನಿಗಳು ಕೇಳಿಸುತ್ತಿದ್ದವು. ದನಕಾಯುವ ಹುಡುಗರು ಇದನ್ನೆಲ್ಲ ಊರಲ್ಲಿ ಹೇಳಿದರು. ಲಲಿತೆಯ ತಂದೆ, ಮುದ್ದಣ್ಣನ ತಂದೆ ಕಲ್ಲಪ್ಪ ಇಬ್ಬರು ಒಂದು ದಿವಸ ರಾತ್ರಿ ನದಿಯ ದಂಡೆಗೆ ಹೋದರು. ಆ ದಿವ್ಯ ಸಂಗೀತ ಅವರ ಕಿವಿಗೆ ಬಿದ್ದಿತು. ಕಲ್ಲಾಗಿದ್ದ ಅವರ ಹೃದಯಗಳು ಕರಗಿದವು. ಕೊಳಲಿನ ಪ್ರತಿ ಸ್ವರದೊಡನೆ ಅವರ ಕಲ್ಲು ಹೃದಯಗಳು ನೀರು ನೀರಾಗುತ್ತಿದ್ದವು. ಕಲ್ಲು ಅರಳಿ ಹೂವಾಗತೊಡಗಿದವು. ಮುದ್ದಣ್ಣ–ಲಲಿತೆ ಇವರು ಜೀವಂತವಿದ್ದಾಗ ಆಗದಿದ್ದುದು ಅವರ ಮರಣದಿಂದ ಸಾಧ್ಯವಾಯಿತು.

ಕಲ್ಲಪ್ಪ ವಿರಕ್ತನಾದ, ಸಾಲಪತ್ರಗಳನ್ನೆಲ್ಲ ಹರಿದು ಹಾಕಿದ. ಸಾಲಗಾರರೆಲ್ಲರನ್ನೂ ಋಣಮುಕ್ತಮಾಡಿದ. ತನ್ನ ಹತ್ತಿರಿದ್ದ ದುಡ್ಡನ್ನೆಲ್ಲ ಬಡವರಿಗಾಗಿ ವೆಚ್ಚಮಾಡಿದ. ತಾನು ಒಂದು ಗುಡಿಸಲದಲ್ಲಿ ಇರತೊಡಗಿದ. ಆಸ್ತಿ ಮಾರಿ ಬಂದ ದುಡ್ಡಿನಿಂದ ಅಲ್ಲಲ್ಲಿ ಬಾವಿಗಳನ್ನು ತೋಡಿಸಿದ. ಆಸ್ಪತ್ರಿಗಳನ್ನು ಕಟ್ಟಿಸಿದ. ಹೊಸ ಶಾಲೆಗಳನ್ನು ಸುರುವು ಮಾಡಿಸಿದ.

ಸಾಮಾನ್ಯ ಜನತೆಗೆ ಉಪಯೋಗವಾಗುವಂಥಹ ಸಂಸ್ಥೆಗಳನ್ನು ಪ್ರಾರಂಭ ಮಾಡಿದ. ಸಾರಾಂಶವೇನಂದರೆ ಕಲ್ಲಪ್ಪ ಹೊಸ ಜೀವನವನ್ನೇ ಪ್ರಾರಂಭಿಸಿದ ಅವನ ಪುನರ್ಜನ್ಮವೆ ಆದಂತಾಯಿತು ಅನ್ನಿರಿ.

ಕಲ್ಲಪ್ಪ ನದಿಯದಂಡೆಯ ಮೇಲೆ ಒಂದು ಸುಂದರವಾದ ಸಮಾಧಿಯನ್ನು ಕಟ್ಟಿಸಿದ. ಅಲ್ಲಿ ಮುದ್ದಣ್ಣನ ಕೊಳನ್ನು ಇಟ್ಟ. ಸಮಾಧಿಯ ಮೇಲೆ "ಲಲಿತೆ–ಮುದ್ದಣ್ಣ" ಎರಡೆ ಶಬ್ದಗಳು ಒಡೆದು ಕಾಣಿಸುತ್ತವೆ. ದನಕಾಯುವ ಹುಡುಗರು ಅಲ್ಲಿಗೆ ಬರಹೋಗುವವರಿಗೆ ಈ ಕಥೆ ಹೇಳುತ್ತಾರೆ. ಕೇಳುವವರು ತಮ್ಮ ಕಂಬನಿಯ ಶ್ರದ್ಧಾಂಜಲಿಯನ್ನು ಅರ್ಪಿಸಿ ಮರಳುತ್ತಾರೆ.



# ಕಂಬನಿಯ ಕೆರೆ

ಅದೊಂದು ಸುಂದರವಾದ ನಗರ. ಪೃಥ್ವಿಗಿಳಿದ ಸ್ವರ್ಗ. ವಿದ್ಯುದ್ದೀಪಗಳು ಲಕಲಕ ಹೊಳೆಯುತ್ತಿದ್ದವು. ಅದೊಂದು ಅಪೂರ್ವ ನೋಟ. ಡಾಂಬರದ ಬೀದಿಗಳಿದ್ದವು. ಸುಂದರವಾದ ಉಪವನಗಳಿದ್ದವು. ನಾಟಕ ಗೃಹಗಳೂ ಗ್ರಂಥಾಲಯಗಳೂ ಇದ್ದವು. ಸಂಜೆಯಲಿ ಸಾವಿರಾರು ನರ-ನಾರಿಯರು ಅಂದವಾದ ನಯವಾದ ಉಡುಪುಗಳನ್ನು ಧರಿಸಿ, ಉಪವನಗಳಲ್ಲಿ ಸುಳಿದಾಡುತ್ತಿದ್ದರು. ಜಗತ್ತಿನಲ್ಲಿ ದುಃಖವೆಲ್ಲಿಯಾದರೂ ಇದೆಯೊ, ಎಂಬ ಸಂಶಯ ಸಹ ಈ ಜನಕ್ಕೆ ಇಲ್ಲವೆಂದು ತೋರುತ್ತಿತ್ತು.

ಆದರೆ ಸ್ವರ್ಗವಿದ್ದಲ್ಲಿ ನರಕ, ತಾವರೆಯಿದ್ದಲ್ಲಿ ಕೆಸರು, ಹೂವಿದ್ದಲ್ಲಿ ಹುಳಗಳು, ಜೀವನದ ಜೊತೆ ಮರಣ, ಬೆಳಕಿದ್ದಲ್ಲಿ ಕತ್ತಲು ಇವು ಇದ್ದೇ ಇರುತ್ತವೆ. ಸ್ವಾತಂತ್ರ್ಯದ ಹತ್ತಿರ ದಾಸ್ಯ, ವೈಭವದ ಸಂಗಡ ವಿಪತ್ತು, ಆಲಾಪವಿದ್ದಲ್ಲಿ ವಿಲಾಪ, ಸುಖದ ನೆರೆಯಲ್ಲಿ ದುಃಖ ಇವನ್ನು ನಾವು ಕಾಣುತ್ತೇವೆ. ಹಾಸ್ಯದ ಬೆನ್ನ ಹಿಂದೆ ಕಂಬನಿ ಇರುತ್ತವೆ. ಈ ಸುಂದರ ಮತ್ತು ಸಂಪನ್ನವಾದ ನಗರದಲ್ಲಿ ದುಃಖವು ಹೇರಳವಾಗಿತ್ತು.

ಈ ನಗರದಲ್ಲಿ ಒಂದು ವಿಶಾಲವಾದ ಧರ್ಮಶಾಲೆ ಇತ್ತು. ಅದರ ಮಧ್ಯದಲ್ಲಿ ವಿಸ್ತೃತವಾದ ಒಂದು ಕೆರೆ ಇತ್ತು. ಇಡೀದಿವಸ ಭಿಕ್ಷೆ ಬೇಡುವ ತಿರುಕರು ರಾತ್ರಿ ಇಲ್ಲಿ ಕೂಡುತ್ತಿದ್ದರು. ಅವರಲ್ಲಿ ಕೆಲವರಿಗೆ ಬೇನೆಯ ಬಳಲಿಕೆ, ಕೆಲವರಿಗೆ ಕಾಯಿಲೆ, ಕೆಲವರ ಮನಸಿಗೆ ಚಿಂತೆ, ಹೀಗೆ ಅದೊಂದು ಜೀವಂತ ನರಕವೇ ಆಗಿತ್ತು.

ಈ ತಿರುಕರಲ್ಲಿ ಚಿಕ್ಕವರು ದೊಡ್ಡವರು, ಗಂಡಸರು ಹೆಂಗಸರು ಎಲ್ಲರೂ ಇದ್ದರು. ಧರ್ಮ ಒಬ್ಬ ತಿರುಕನ ಮಗ. ಇನ್‌ಫ್ಲೂಎಂಝಾ

ಬೇನೆಯಿಂದ ಅವನ ತಂದೆ ತೀರಿಕೊಂಡ. ಜೋಳಿಗೆಯೇ ಅವನ ಆಸ್ತಿ. ಅದನ್ನು ಬಿಟ್ಟು ಈ ಜಗತ್ತಿನಿಂದ ಅವ ತೆರಳಿದ. ತಂದೆ ಸತ್ತದ್ದು ನೋಡಿ ಧರ್ಮನಿಗೆ ಬಹಳ ವ್ಯಥೆಯಾಯಿತು, ಬಡವರಿಗೂ ಹೃದಯವಿರುತ್ತದೆ. ಪ್ರೀತಿಯ ಭಾವನೆ ಇರುತ್ತದೆ. ಆ ದಿವಸ ಧರ್ಮ ಹುಚ್ಚನಂತಾಗಿದ್ದ. ತಂದೆಯ ದೇಹ ಹುಗಿಯಲೂ ಬರಲೊಲ್ಲದು, ಸುಡಲೂ ಬರಲೊಲ್ಲದು; ಅವನಲ್ಲಿ ದುಡ್ಡು ಇದ್ದಿಲ್ಲ. ತಿರುಕರೆಲ್ಲರೂ ಊರಲ್ಲಿ ಭಿಕ್ಷೆ ಬೇಡಲಿಕ್ಕೆ ಹೋಗಿದ್ದರು. ಮುನಸಿಪಾಲಟಿಯ ಗಾಡಿ ಬಂದು ಶವವನ್ನು ಒಯ್ದಿತು. ಸತ್ತನಾಯಿ, ಎಮ್ಮೆಗಳನ್ನು ಆ ಗಾಡಿಯಿಂದಲೆ ಒಯ್ಯುತ್ತಿದ್ದರು.

ಧರ್ಮ ಆ ಗಾಡಿಯೊಡನೆ ಹೊರಟ. ಶವವನ್ನು ಹುಗಿಯಲಾಯಿತು. ಧರ್ಮ ಅತ್ತು, ಅತ್ತು, ತಿರುಗಿದ. ಹೀಗೆಯೇ ಕೆಲವು ದಿನಗಳಾದವು. ದುಃಖ ಕಡಿಮೆಯಾಯಿತು. ನಡುವೆ ಯಾವಾಗಾದರೊಮ್ಮೆ ಮಲ್ಲಿಗೆ ಹೂವನ್ನು ತನ್ನ ತಂದೆಯ ಶವ ಹುಗಿದಲ್ಲಿ ಒಯ್ದು ಇಡುತ್ತಿದ್ದ. ತಂದೆಯ ಒಂದು ಹರಕ ವಸ್ತ್ರವನ್ನು ತಂದೆಯ ನೆನಪೆಂದು ಇಟ್ಟಿದ್ದ. ಅದೇ ಅವನಿಗೆ ಪಿತೃಪ್ರೇಮವಾಗಿತ್ತು.

ರಾತ್ರಿ ಎಷ್ಟು ಚಳಿಯಿದ್ದರೂ ಅದನ್ನೆ ಹೊತ್ತುಕೊಳ್ಳುತ್ತಿದ್ದ. ಅದರ ಹೊರ್ತಾಗಿ ಮತ್ತೇನೂ ಅವನ ಹತ್ತರ ಇದ್ದಿಲ್ಲ. ಬಡವರಿಗೆಲ್ಲಿ ಚಳಿ, ಗಾಳಿ? ದುಡ್ಡಿದ್ದವರಿಗೆ ಜಗತ್ತಿನಲ್ಲಿರುವ ಎಲ್ಲ ಉಣ್ಣೆಯ ಅರಿವೆ ಹೊದಿಸಿದರೂ ಚಳಿ ಬಾಧಿಸದೇ ಇರುವದಿಲ್ಲ. ತಂದೆಯ ಪ್ರೀತಿಯ ವಸ್ತ್ರ ಧರ್ಮನಿಗೆ ಸಾಕಷ್ಟು ಉಷ್ಣತೆ ಕೊಡುತ್ತಿತ್ತು.

ಧರ್ಮ ಆ ವಸ್ತ್ರವು ಬೇಗ ಹರಿಯಬಹುದೆಂದು ಎಂದೂ ಒಗೆಯುತ್ತಿದ್ದಿಲ್ಲ. ಅದು ಹೊಲಸಾದರೂ ಏಕೆ ಆಗಬೇಕು. ಗಂಗೆ ಹೊಲಸಾಗುವಳೇ ? ಸೂರ್ಯಚಂದ್ರರು ಮಲಿನರಾಗುವದುಂಟೇ ದೇವರು ಮಲಿನನಾಗುವನೇ? ಪ್ರೀತಿ ಎಂದಿಗೂ ಮಲಿನವಾಗುವದಿಲ್ಲ. ಆ ವಸ್ತ್ರ, ಅವನ ತಂದೆಯ ಪ್ರೀತಿಯ ನೆನಪಿನದು. ಧರ್ಮನ ಆ ಹರಕ ಅರಿವೆ ನೋಡಿ ಸಿರಿವಂತರು ಮೂಗು ಹಿಡಿಯುತ್ತಿದ್ದರು. ಅದರ ನಾತ ಅವರಿಗೆ ಸಹನವಾಗುತ್ತಿದ್ದಿಲ್ಲ. ಅತ್ತರ, ಸುವಾಸಿಕ ಎಣ್ಣೆ, ಪರಿಮಳ ದ್ರವ್ಯ ಇವುಗಳ

ವಾಸನೆಯ ಗುರುತೇ ಗುರುತು ಅವರಿಗೆ. ಧರ್ಮನ ವಸ್ತ್ರದಲ್ಲಿ ಅಡಕ ವಾದ ತಂದೆಯ ಪ್ರೀತಿಯ ಸುವಾಸನೆ ತಿಳಿಯುವಷ್ಟು ಶಕ್ತಿ ಅವರ ಮೂಗಿ ನಲ್ಲಿದ್ದಿಲ್ಲ.

ಹರಕ ಅರಿವೆ, ಮತ್ತೆ ಹರಿದೀತೆಂಬ ಅಂಜಿಕೆ ಧರ್ಮನಿಗೆ. ಅದನ್ನು ಅವನು ಬಲು ಹಗುರಾಗಿ (ನಾಜೂಕಾಗಿ) ಉಪಯೋಗಿಸುತ್ತಿದ್ದ. ಅದನ್ನು ಯಾರಾದರೂ ಕಳವು ಮಾಡಬಹುದೆಂಬ ಅಂಜಿಕೆಯೂ ಅವನಿಗೆ ಇತ್ತು. ತಿರುಕರ ಕಳವು ಮಾಡುವ ತಿರುಕರೂ ಇದ್ದಾರೆ! ಅಷ್ಟು ಸಹ ಅರಿವೆ ಯಿಲ್ಲದ ತಿರುಕರಿಗಿಂತ ಧರ್ಮ ಸಿರಿವಂತನಿದ್ದ. ಒಂದು ಹರಕ ಅರಿವೆ ಉಳ್ಳವನಾಗಿದ್ದ.

*　　*　　*　　*

ಅಂದು ಸರದಾರ ಗೋಪಾಲದಾಸ ಅವರಲ್ಲಿ ಮದುವೆಯ ಸಮಾ ರಂಭವಿತ್ತು. ಅವರ ಮಗಳಾದ ಹೇಮಲತೆಯ ಮದುವೆ. ಅವಳು ಕಲಿತವಳು. ತಂದೆಯ ಪ್ರೀತಿಯ ಮಗಳು. ಶ್ರೀಮಂತ ತಂದೆಯ ಒಬ್ಬಳೇ ಒಬ್ಬಳಾದ ಮಗಳು. ಚೆಲುವೆ ಮತ್ತು ವಿದ್ಯಾವತಿ ಅಂದಮೇಲೆ ಕೇಳುವುದೇನಿದೆ? ಇಂಗ್ಲಂಡಿಗೆ ಹೋಗಿಬಂದ ಒಬ್ಬ ತರುಣನೊಡನೆ ಅವಳ ಮದುವೆ ಆಗುವದಿತ್ತು. ವಧೂವರರು ಒಬ್ಬರಿಗೊಬ್ಬರು ಅನು ರೂಪರು; ಸಾಗರ-ಸರಿತೆಯಂತೆ, ಚಂದ್ರ-ರೋಹಿಣಿಯಂತೆ ಎಂದು ಜನ ಅನ್ನುತ್ತಿದ್ದರು

ಗೋಧೂಳಿ ಮುಹೂರ್ತದ ವಿವಾಹ. ನೂರಾರು ಮೋಟರು ನಿಂತಿ ದ್ದುವು. ವಿದ್ಯುದ್ದೀಪಗಳು ಕಣ್ಣು ಕುಕ್ಕಿಸುತ್ತಿದ್ದುವು. ಊರೊಳಗಿನ ದೊಡ್ಡವರೆಲ್ಲರೂ ಆಗಮಿಸಿದ್ದರು. ಹೂವಿನ ಪರಿಮಳ, ಅತ್ತರದ ವಾಸನೆ ಪಸರಿಸಿದ್ದುವು. ಮದುವೆಯ ವಿಜೃಂಭಣೆ ನೋಡುವಂತಿತ್ತು.

ಮರುದಿನ ಗೋಪಾಲದಾಸರಲ್ಲಿ ಭೋಜನ ಸಮಾರಂಭ ಇತ್ತು. ದಿವಾಣಖಾನೆಯನ್ನು ಶೃಂಗರಿಸಿದ್ದರು. ಲೋಡು, ತೆಕ್ಕೆ, ರತ್ನಗಂಬಳಿ ಹಾಸಿದ್ದುವು. ಸಂಗೀತ ನಡೆದಿತ್ತು. ಎಲೆ ಅಡಕಿಯ ಬೆಳ್ಳಿಯ ತಬಕ ಗಳನ್ನು ಅಲ್ಲಲ್ಲಿ ಇಟ್ಟಿದ್ದರು. ಕೊರತೆಯ ಮಾತೇ ಇದ್ದಿಲ್ಲ ಅಲ್ಲಿ.

ಪಂಕ್ತಿಯಲ್ಲಿ ಚಂದನದ ಮಣೆಗಳು, ಬೆಳ್ಳಿಯ ತಾಟುಗಳು ಶೋಭಿಸುತ್ತಿದ್ದವು. ಊದಿನಕಡ್ಡಿಗಳ ಘಮಘಮ ವಾಸನೆ ಹರಡಿತ್ತು. ಪಕ್ವಾನ್ನದ ಸುವಾಸನೆ ಇಡಗಿತ್ತು. ಅಗ್ರಹ ನಡೆದಿತ್ತು. ಸಾಕುಸಾಕಾಗುವಷ್ಟು ಪಕ್ವಾನ್ನ ಎಲ್ಲರಿಗೂ ಬಡಿಸಿದರು. ಪ್ರತಿಯೊಬ್ಬರು ನಾಲ್ಕು ಜನರ ಹೊಟ್ಟೆ ತುಂಬುವಷ್ಟು ಅನ್ನವನ್ನು ಎಲೆಯಲ್ಲಿ ಚಲ್ಲಿದ್ದರು. "ಇನ್ನೊಂದು ಉಂಡೆ ತಕ್ಕೊಳ್ಳಿರಿ. ಮೇಲೆ ಒಂದು ಸೋಡಾ ಬಾಟಲಿ ಜಡಿದರಾಯಿತು. ಭಸ್ಮವಾಗುತ್ತದೆ." ಈ ರೀತಿ ಒಬ್ಬರಿಗೊಬ್ಬರು ಅಗ್ರಹ ಮಾಡುತ್ತ ಊಟ ನಡೆಸಿದ್ದರು. ಸೋಡಾ ಇದೆ, ಡಾಕ್ಟರು ಇದ್ದಾರೆ ಅಂದಮೇಲೆ ತಿನ್ನುವದನ್ನು ಕಡಿಮೆ ಏಕೆ ಮಾಡಬೇಕು ? ಸಿರಿವಂತರ ಬೋಗ ಭೋಗಿಸುವ ರೀತಿಯೇ ಬೇರೆ. ರೋಮ ನಗರಕ್ಕೆ ಬೆಂಕಿ ಹಚ್ಚಿ ಅದನ್ನು ನೋಡುವದರಲ್ಲಿಯೇ ನೇರೊ ಎಂಬ ರೋಮನ್ ಬಾದಶಹನಿಗೆ ಆನಂದವೆನಿಸುತ್ತಿತ್ತು. ಅದೇ ರೀತಿ ಮೇಜವಾನಿಗಳಲ್ಲಿ ಅನ್ನ ಹಾಳು ಮಾಡುವದರಲ್ಲಿಯೇ ಸಿರಿವಂತರಿಗೆ ಆನಂದ. ಎಲೆಯಲ್ಲಿ ಚೆಲ್ಲದಿದ್ದರೆ ಅದು ಅವರಿಗೆ ಅಪಮಾನದ ಮಾತು. ಹೆಚ್ಚು ಅನ್ನ ಯಾರಲ್ಲಿ ಸೂರೆಯಾಗುತ್ತದೆಯೋ ಅವನೇ ಹೆಚ್ಚು ಸಿರಿವಂತನು ! ಊಟ ಮಾಡುವವರಿಗೆ ಶ್ರಮವಾಗುತ್ತಿತ್ತು. ಇವರ ದೃಷ್ಟಿಯಲ್ಲಿ ಕಟ್ಟಿಗೆ ಒಡೆದರೆ, ಹೊಲದಲ್ಲಿ ನಟ್ಟು ಕಡೆದರೆ ಕೂಲಿಕಾರರಿಗೆ ಬೆವರು ಒಡೆಯುವದಿಲ್ಲ. ಆದರೆ ತಾವು ಒಂದೆರಡು ಉಂಡೆ ತಿಂದ ಕೂಡಲೆ ಬೆವರು ಒಡೆಯುವುದು! ಶ್ರಮವೆನಿಸಬಾರದೆಂದು ರೇಡಿಯೊ ಹಚ್ಚಿದ್ದರು. ಬೆವರು ಆರಬೇಕೆಂದು ಬೀಸಣಿಕೆಗಳಿದ್ದವು. ಹೀಗೆ ಆ ಪಂಕ್ತಿ ಎರಡು ಗಂಟೆ ನಡೆದಿತ್ತು.

ಹೊರಗೆ ಜನಜಾತ್ರೆ. ಯಾರಿವರು ಇಷ್ಟು ಜನ ! ಮೇಜವಾನಿಗೆ ಬಂದವರೋ? ಯಾರು ಕರೆದವರು ಇವರನ್ನು? ಪ್ರೀತಿಯಿದ್ದಲ್ಲಿ ಆಮಂತ್ರಣ ಬೇಕಾಗಿಲ್ಲ. ತಿರುಕರು ಎಲ್ಲರನ್ನು ಪ್ರೀತಿಸುತ್ತಾರೆ. ಅವರು ಎಲ್ಲರ ಮನೆಗೆ ಹೋಗುತ್ತಾರೆ. ಆ ಧರ್ಮಶಾಲೆಯಲ್ಲಿರುವ ತಿರುಕರೆಲ್ಲರು ಆ ಬೀದಿಯಲ್ಲಿ ಒಟ್ಟು ಕೂಡಿದ್ದರು. ಎಲೆಯಲ್ಲಿ ಚಲ್ಲಿದ್ದ ಎಂಜಲ ಸಿಗಬೇಕೆಂಬ ಆಶಯಿಂದ ಅಂದು ಅಲ್ಲಿಗೆ ಬಂದಿದ್ದರು. ಬಾಗಿಲದಲ್ಲಿ ನಿಂತ ಒಬ್ಬ ಉದ್ಧಟ

ಮನೆಯೊಳು ಅವರನ್ನು ಬೆದರಿಸುತ್ತಿದ್ದ. "ಇನ್ನೂ ಪಂಕ್ತಿ ಮುಗಿಯುವ ದಿಲ್ಲ, ಇಷ್ಟರಲ್ಲಿ ಈ ನಾಯಿಗಳೇ ಇಲ್ಲಿ ಕೂಡಿದವು? ಹಾಂ! ಹಾಂ! ಒದರ ಬೇಡಿರಿ! ದೊಡ್ಡ ದೊಡ್ಡ ಮಂದಿ ಒಳಗೆ ಊಟಕ್ಕೆ ಕೂತಿದ್ದಾರೆ, ತಿಳಿ ಯುವದಿಲ್ಲವೇ ನಿಮಗೆ? ಕಾಗಿ, ನಾಯಿ, ನರಿಗಳಂತೆ ಏನಿದು ಕೂಗಾಟ ಎಬ್ಬಿಸಿದ್ದೀರಿ? ಈ ರೀತಿ ನೀವು ಗಡಿಬಿಡಿ ಎಬ್ಬಿಸಿದರೆ ಏನೂ ಸಿಗಲಿಕ್ಕಿಲ್ಲ. ಹುಷಾರಿ!" ಎಂದು ಅವರಿಗೆಲ್ಲ ಎಚ್ಚರ ಕೊಡುತ್ತಿದ್ದ.

"ಹಡದಪ್ಪ, ಬೇಡ, ನಾವು ಸುಮ್ಮನೆ ಕೂಡುತ್ತೇವೆ. ಎರಡು ದಿವಸ ಉಪವಾಸ ಇದ್ದೇವೆ. ನಿನ್ನ ಹೆಂಡರು ಮಕ್ಕಳು ಸುಖಿಯಾಗಿರಲಿ-" ಈ ರೀತಿ ಮಾತುಗಳನ್ನು ಆ ತಿರುಕರು ಆಡುತ್ತಿದ್ದರು.

ಈ ಎರಡು ದೃಶ್ಯ ಕಂಡವರಿಗೆ ಆ ನಗರದ ವೈಭವದ ನಿಜವಾದ ಕಲ್ಪನೆ ಬರುವದು. ಒಳಗೆ ಸಂಪತ್ತು, ಹೊಳಗೆ ವಿಪತ್ತು; ಒಳಗೆ ಸಂಗೀತ ಹೊರಗೆ ಚೀರಾಟ; ಒಳಗಿದ್ದದರ ಹೊಟ್ಟೆ ತುಂಬಿದ್ದವು, ಹೊರಗಿದ್ದವರ ಹೊಟ್ಟೆಗಳು ಬರಿದಾಗಿದ್ದವು; ಒಳಗೆ ಹೊರಲಾರದಷ್ಟು ತಿನಿಸು, ಹೊರಗೆ ಏನೂ ಇಲ್ಲ. ಒಳಗೆ ಸುಕಾಲ, ಹೊರಗೆ ಬರಗಾಲ; ಒಳಗೆ ಸುಖ, ಹೊರಗೆ ದುಃಖ; ಒಳಗೆ ಆನಂದ, ಹೊರಗೆ ಖೇದ. ಒಳಗೆ ಜೀವನ, ಹೊರಗೆ ಮರಣ. ಈ ಒಳಗಿನ ಮತ್ತು ಹೊರಗಿನ ಎರಡು ದೃಶ್ಯಗಳು ಒಂದಕ್ಕೊಂದು ವಿರೋಧಿಯಾಗಿದ್ದು, ಮೈಮೇಲೆ ಮುಳ್ಳು ತರುವಂಥ ವಿವೆ.

ಒಳಗಿನ ಮಹಾ ಜನರೆಲ್ಲರು ಎದ್ದರು. ಕೈ ತೊಳದ-ಕೊಂಡರು. ತಾಂಬೂಲವಾಯಿತು. ತುಟಿ ಕೆಂಪಗಾದವು. ಸಂಗೀತ ಕೇಳುತ್ತ ಕೇಳುತ್ತ ಲೋಡಿಗೆ ಆತುಕೊಂಡು ಅಲ್ಲಿಯೇ ಕೆಲಜನ ನಿದ್ದೆ ಮಾಡತೊಡ ಗಿದರು.

ಆಳುಗಳು ಎಲೆಗಳಲ್ಲಿ ಚೆಲ್ಲಿದ ಉಂಡೆ, ಜಿಲೇಬಿ ಮೊದಲಾದವುಗಳ ಎಂಜಲವನ್ನು ಬುಟ್ಟಿಗಳಲ್ಲಿ ತುಂಬಿ ಹೊರಗೆ ತಂದರು. ತಿರುಕ ರೆಲ್ಲರು ಎಚ್ಚತ್ತರು. ನನಗೆ ನಿನಗೆ ಎಂದು ಒಬ್ಬರಮೇಲೊಬ್ಬರು

ಬಿದ್ದು ಮುಂದೆ ಸರಿದರು. ಇಷ್ಟೊತ್ತು ಅವರೆಲ್ಲ ದಾರಿ ಕಾಯ್ದ ಎಂಜಲು-ಅವರ ಪರಬ್ರಹ್ಮ-ಅವರೆದುರು ಬಂದಿತು.

ಹಕ್ಕಿಗಳಿಗೆ ಕುಸುಬಿ ಕಾಳು ತೂರುವಂತೆ ಸಿರಿವಂತರ ಮನೆಯ ಆಳುಗಳು ಆ ಎಂಜಲ ತೂರಿದರು. ತೂರಿದ ಚೂರು ಆರಿಸಲು ತಿರುಕರಲ್ಲಿ ಗೊಂದಲವೇ ಎದ್ದಿತು. "ಏ ನನ್ನ ಮೈಗೆ ಕೈ ಹಚ್ಚಿಗಿಚ್ಚೀ" ಎಂದು ಬಡಿಗಿ ತೋರಿಸುತ್ತ ಆ ಭಯ್ಯಾ ಅಲ್ಲೆ ನಿಂತಿದ್ದ. ಚೆಲ್ಲಿದ ಚೂರು ಮೇಲಿಂದ ಮೇಲೆಯೆ ಹಿಡಿಯಲು ಕೆಲವರ ಪ್ರಯತ್ನ. ಕೆಳಗೆ ಬಿದ್ದುದನ್ನು ಆರಿಸಿ ಮತ್ತೆ ಹೆಚ್ಚು ದೊರಕಿಸುವ ಪ್ರಯತ್ನ ಕೆಲವರದು, ಈ ರೀತಿ ತಿರುಕರಲ್ಲಿ ಬಡೆದಾಟ ನಡೆದಿತ್ತು. ಕೋಳಿಗಳ ಕಾದಾಟ, ಟಗರುಗಳ ಕಾದಾಟ ನಡೆಸುವಂತೆ ಸಿರಿವಂತರ ಆಳುಗಳು ತಿರುಕರಲ್ಲಿ ಬಡೆದಾಟ ಹಚ್ಚಿದರು.

ಧರ್ಮನಿಗೆ ಇನ್ನೂ ಏನೂ ಸಿಕ್ಕಿದಿಲ್ಲ. ಅವನು ಮುಂದೆ ಹೋಗುವಷ್ಟರಲ್ಲಿ ಯಾರಾವರೂ ಒಬ್ಬರು ಅವನನ್ನು ಹಿಂದೆ ನೂಕುತ್ತಿದ್ದರು. ಕೊನೆಗೊಮ್ಮೆ ಬಹಳ ಪ್ರಯತ್ನ ಮಾಡಿ ಕೈ ಮುಂದೆ ಒಡ್ಡಿದನು. ಅದು ಆ ಆಳಿನ ಕೈಯಲ್ಲಿದ್ದ ಪುಟ್ಟಿಗೆ ತಾಕಿತು! ಅಬ್ರಹ್ಮಣ್ಯಂ! ಎಂದು ಆ ಸನಾತನಿ ಆಳು ರೇಗಿಗೆದ್ದ "ಎಷ್ಟು ಸೊಕ್ಕು ಇವನದು! ನನ್ನನ್ನು ಮುಟ್ಟಿದೆಯಾ ಚಾಂಡಾಲಾ?" ಎಂದು ಗರ್ಜಿಸಿದ. "ಇವನೇ ನಿಮ್ಮನ್ನು ಮುಟ್ಟಿದವನು" ಎಂದು ಧರ್ಮನನ್ನು ಹಿಡಿದುಕೊಂಡು ಇನ್ನೊಬ್ಬ ತಿರುಕ ಬಂದ. ಆ ಆಳು ಧರ್ಮನಿಗೆ ನಾಲ್ಕಾರು ಸಾರೆ ಕೆನ್ನೆಯ ಮೇಲೆ ಹೊಡೆದ. ಹೊಟ್ಟೆಯಲ್ಲಿ ಏನೂ ಇದ್ದಿಲ್ಲ; ಮೇಲೆ ಬಡಿತ. ಪಾಪ! ಧರ್ಮ ಮೂರ್ಛೆ ಬಂದು ಬಿದ್ದ. ಅಷ್ಟರಲ್ಲಿ ಆ ರಾಕ್ಷಸನು ಅವನ ಹೊಟ್ಟೆಯ ಮೇಲೆ ಒದ್ದನು. ಧರ್ಮನು ಚಿಟ್ಟನೆ ಚೀರಿದನು. ಅದೇ ಕಾಲದಲ್ಲಿ, ಮೇಲೆ ದಿವಾಣಖಾನೆಯಲ್ಲಿ ಒಂದು ಉತ್ಕೃಷ್ಟ ಸಂಗೀತದ ರೆಕಾರ್ಡನ್ನು ಹಚ್ಚಿದರು.

ಎಂಜಲ ತೂರಿದ್ದಾಯಿತು. ಸಿಗದೆ ಇದ್ದ ಕೆಲವು ತಿರುಕರು "ಮುಂದಿನ ಪಂಕ್ತಿ ಆದ ಮೇಲೆ ನಮಗೆ ಬಡಿಸು ಹಡದಪ್ಪ" ಎಂದು ಆ ಆಳಿಗೆ ಹೇಳಿಕೊಂಡರು.. ಸಂಜೆಯಾಗತೊಡಗಿತು. ಆದರೂ ಏನಾ-

ದರೂ ಸಿಕ್ಕೀತೆಂಬ ಆಸೆಯಿಂದ ತಿರುಕರು ಅಲ್ಲಿಯೇ ಸುಳಿದಾಡು ತ್ತಿದ್ದರು.

ರಾತ್ರಿಯಾಯಿತು. ದೀಪಗಳು ಹತ್ತಿದವು. ಗೋಪಾಲದಾಸನ ಮನೆ ಇಂದ್ರಪುರಿಯಂತೆ ಕಾಣುತ್ತಿತ್ತು. ಆಕಾಶದ ಮಿನುಗುವ ತಾವ ರಾರು ಚಿಕ್ಕೆಗಳು ಪೃಥ್ವಿತಲಕ್ಕೆ ಬಂದಂತೆ ತೋರುತ್ತಿತ್ತು. ಅವು ದೀನರ, ಬಡವರ ಉರಿಯುವ ಆತ್ಮಗಳಿದ್ದವೋ ಏನೋ?

ರಾತ್ರಿ ಗೋಪಾಲದಾಸರಲ್ಲಿ ಸಂಗೀತ ಕಚೇರಿ ಇತ್ತು; ನೃತ್ಯವೂ ಇತ್ತು. ಎಲ್ಲ ತೆರದ ಸುಖೋಪಭೋಗಗಳ ಸಿದ್ಧತೆ ಅಲ್ಲಿ ಇತ್ತು.

ಆದರೆ ನಮ್ಮ ಧರ್ಮನೆಲ್ಲಿದ್ದ? ಎಂಜಲದ ದಾರಿ ಕಾಯ್ದೇ ಕಾಯ್ದು ತಿರುಕರೆಲ್ಲರು ಧರ್ಮಶಾಲೆ ಸೇರಿದ್ದರು. ತಮಗೆ ಸಿಕ್ಕ ಚೂರುಗಳನ್ನು ತಿನ್ನುತ್ತ ಕೆರೆಯ ದಂಡೆಯ ಮೇಲೆ ಕುಳಿತಿದ್ದರು. ಆದರೆ ಧರ್ಮನೆಲ್ಲಿ? ಇನ್ನೂ ಬಿಕ್ಕೆ ಬೇಡುತ್ತಲಿರುವನೇ? ಧರ್ಮ ಅಲ್ಲಿಯೇ ಗೋಪಾಲದಾಸರ ಮನೆಯ ಹತ್ತಿರ ಏನೋ ಹುಡುಕುತ್ತ ಇದ್ದ. ಏನು ಕಳೆದುಕೊಂಡಿದ್ದ? ಉಂಡಿಯ ಚೂರೋ, ಜಿಲೇಬಿಯ ಚೂರೋ? ಏನದು ಕಳೆದುಕೊಂಡಿದ್ದ?

“ನನ್ನ ಸರ್ವಸ್ವವನ್ನು ಕಳೆದುಕೊಂಡೆ. ಅಯ್ಯೋ! ಯಾರಿನ್ನು ನನಗೆ ಆಧಾರ? ನನ್ನ ಕಂಬನಿ ಒರೆಸುವವರಾರು? ಚಳಿಯಿಂದ ನನ್ನನ್ನು ಉಳಿಸುವವರಾರು? ನನ್ನ ಹರಕು ವಸ್ತ್ರ ಕಳೆಯಿತು. ಯಾರವರು ಅದನ್ನು ಕದ್ದವರು? ನಮ್ಮಪ್ಪನ ಕೃಪೆ, ಪ್ರೀತಿಯ ಛತ್ರ ಹೋಯಿತು, ಕಳೆದುಕೊಂಡೆ” ಎಂದು ಆರ್ತದನಿಯಿಂದ ಧರ್ಮ ಅಳು ತ್ತಿದ್ದ. ಅವನಿಗೆ ಜಿಲೇಬಿ, ಉಂಡೆ ಬೇಡಾಗಿದ್ದವು. ತನ್ನ ತಂದೆಯ ನೆನಹೊಂದು ಬೇಕಾಗಿತ್ತು. ಹರಕು ಅರಿವೆಗಾಗಿ ಎಷ್ಟು ಶೋಕ?

ಧರ್ಮನಿಗೆ ಹೊಟ್ಟೆಯಲ್ಲಿ ವೇದನೆ! ಲತ್ತಾಪ್ರಹಾರದಿಂದಲೋ, ಹಸಿವೆಯಿಂದಲೋ? ಹೊಟ್ಟೆ ಹಿಡಿದುಕೊಂಡು ಹೇಗೋ ನಡೆದಿದ್ದ ಧರ್ಮ. ಅವನಲ್ಲಿದ್ದ ಶಕ್ತಿ ಹೋಗಿತ್ತು. ಆ ಅರಿವೆಯಲ್ಲಿತ್ತು ಅವನ ಜೀವ,

ಚೈತನ್ಯ, ಶಕ್ತಿ. ಹಾದಿಯಲ್ಲಿ ಅವನಿಗೆ ಮೂರ್ಛೆ ಬಂದಂತೆ ಆಗುತ್ತಿತ್ತು. ಹೇಗಾದರೂ ಮಾಡಿ ಧರ್ಮಶಾಲೆ ಮುಟ್ಟಬೇಕೆಂದು ಅವನ ಆಸೆ.

ಕೊನೆಗೊಮ್ಮೆ ಮುಟ್ಟಿದ. ಕೆರೆಯ ದಂಡೆಯ ಮೇಲೆ ಹೋದ. ಅಲ್ಲಿಯೇ ಅಳುತ್ತ ಕುಳಿತ. ಕಂಬನಿಯ ಸಾಗರವನ್ನು ಕೆರೆಯಲ್ಲಿ ಒಂದು-ಗೂಡಿಸಿದ. ಆ ಕೆರೆ ತಿರುಕರ ಕಂಬನಿಯ ಕೆರೆಯೇ ಆಗಿತ್ತು. ಅಳುತ್ತ ಅಳುತ್ತ ಧರ್ಮ ಒರಗಿದ. ಅವನಿಗೆ ನಿದ್ದೆ ಹತ್ತಿತು—ಅದು ಚಿರ ನಿದ್ರೆಯೇ ಆಗಿತ್ತು.

ಗೋಪಾಲದಾಸನ ಅಟ್ಟದಲ್ಲಿ ಸಂಗೀತ ಕಚೇರಿ ನಡೆದಿತ್ತು. ಜನ ಕತ್ತು ಹಾಕುತ್ತಿತ್ತು. ಸಿರಿವಂತ ಶೋಕಿ ಜನರು ಸಿಗರೇಟು ಸೇದುತ್ತಿದ್ದರು, ಎಲೆ ಅಡಕೆ ಹಾಕಿಕೊಳ್ಳುತ್ತಿದ್ದರು, ಸೆರೆ ಕುಡಿಯುತ್ತಿದ್ದರು.

ಬೆಳಗಾಯಿತು ಸೂರ್ಯನು ಮೇಲಕ್ಕೇರಿದ. ಹಕ್ಕಿ ಪಕ್ಕಿಗಳು ಗೂಡಬಿಟ್ಟವು. ತಿರುಕರು ತಿರುಗಾಡತೊಡಗಿದರು. ಆದರೆ ಕೆರೆಯ ದಂಡೆಯ ಮೇಲೆ ಮಲಗಿದವರಾರು ! ಧರ್ಮ. ಅವನ ಪ್ರಾಣ ದೇವರಲ್ಲಿ ಭಿಕ್ಷೆ ಬೇಡಲಿಕ್ಕೆ ಹೋಗಿತ್ತು. ಅಲ್ಲಿಯಾದರೂ ಅವನಿಗೆ ಭಿಕ್ಷೆ ಸಿಕ್ಕುವದೇ ?



# ಭಾವವಿದ್ದಲ್ಲಿ ದೇವ.



ಇದು ಬಹಳ ಹಳೆಯ ಕತೆ. ಈಗಿದ್ದ ವಾತಾವರಣವು, ಪರಿಸ್ಥಿತಿಯು ಆಗಿದ್ದಿಲ್ಲ. ಎಲ್ಲ ಊರು ಸುಖಸಂಪನ್ನವಾಗಿದ್ದವು, ಸಮೃದ್ಧವಾಗಿದ್ದವು. ಎಲ್ಲರಿಗೂ ಸಾಕಷ್ಟು ಕೆಲಸವಿತ್ತು. ಕುಂಬಾರ ಗಡಿಗೆ ಮಾಡುತ್ತಿದ್ದ, ಚಮಗಾರ ಕಾಲ್ಮರಿ ಹೊಲಿಯುತ್ತಿದ್ದ. ಸಿಂಪಿಗ ಬಟ್ಟೆ ಹೊಲಿಯುತ್ತಿದ್ದ. ನೇಕಾರ ಬಟ್ಟೆ ನೇಯುತ್ತಿದ್ದ. ಪಿಂಜಾರನು ಹಂಜಿ ಮಾಡುತ್ತಿದ್ದ. ಬಣಗಾರ ಬಣ್ಣ ಹಾಕುತ್ತಿದ್ದ. ಗಾಣಿಗ ಎಣ್ಣೆ ತೆಗೆಯುತ್ತಿದ್ದ. ಊರಲ್ಲಿ ಬಡಿದಾಟ ಇದ್ದಿಲ್ಲ, ಜಗಳಾಟಗಳು ಇದ್ದಿಲ್ಲ. ಏನಾದರು ಭಿನ್ನಾಭಿಪ್ರಾಯಗಳಾದರೆ ಪಂಚರು ಹೇಳಿದಂತೆ ಎಲ್ಲರೂ ಕೇಳುತ್ತಿದ್ದರು. ಕೋರ್ಟು, ಕಚೇರಿ, ವಕೀಲರು, ಭತ್ತೆ ಇವೇ ಮೊದಲಾದವುಗಳು ಆ ಕಾಲದಲ್ಲಿ ಇದ್ದಿಲ್ಲ.

ಪ್ರತಿಯೊಂದು ಊರಲ್ಲಿ ಸಾಲೆಯೊಂದು ಇರುತ್ತಿತ್ತು. ಸಾಲೆಯ ಶಿಕ್ಷಕರ ಮೇಲೆ ಊರ ಜನರ ಭಕ್ತಿ ಬಹಳ. ಹಗಲು. ಹುಡುಗರಿಗೆ ಕಲಿಸುತ್ತಿದ್ದರು. ರಾತ್ರಿ ಕಥೆ, ಪುರಾಣ, ಕೀರ್ತನ ಹೇಳುತ್ತಿದ್ದರು. ಇಡಿ ಊರಿಗೇ ಗುರುವಿದ್ದಂತೆ ಇದ್ದರು. ಅವರಿಗೆ ವೇತನವಿರಲಿಲ್ಲ. ಊರ ಜನರು ಅವರಿಗೊಂದು ಮನೆ ಕೊಡುತ್ತಿದ್ದರು. ಕೆಲವರು ಕಾಳುಕಡಿ ಕೊಡುತ್ತಿದ್ದರು. ಮತ್ತೆ ಕೆಲವರು ಹಾಲು ಮಲ್ಲೆ ಕೊಟ್ಟು ಅವರ ಪರಾಮರಿಕೆ ಮಾಡುತ್ತಿದ್ದರು. ಅವರಿಗೆ ಯಾವ ಕೊರತೆಯೂ ಬರದಂತೆ ಊರ ಜನ ನೋಡಿಕೊಳ್ಳುತ್ತಿದ್ದರು. ಅವರಲ್ಲಿ ಮದುವೆ ಮುಂಜಿವೆ ಇದ್ದರೆ ತಮ್ಮವೇ ಎಂದು ತಿಳಿದು ಊರ ಜನರೆಲ್ಲರು ಅವರಿಗೆ ನೆರವಾಗುತ್ತಿದ್ದರು.

ಆ ಊರ ಹೆಸರು ಹೊನ್ನಾಪುರ. ಹೆಸರಿಗೊಪ್ಪುವಂತೆ ಇತ್ತು ಆ ಊರು. ಹೊನ್ನಿನ ಊರೇ ಆಗಿತ್ತದು. ಉತ್ತಮವಾದ ಹವೆ, ನೀರು.

ಹನ್ನೆರಡು ತಿಂಗಳ ಹೊಳೆ ಹರಿಯುತ್ತಿತ್ತು. ಹೊಳೆ ಎಂದರೆ ಊರ ಕಳೆ. ಹೊಳೆ ಇದ್ದಲ್ಲಿ ಬೆಳೆ ಎಂಬ ಗಾದೆ ಅದೆ. ಹೊನ್ನಾಪುರದಲ್ಲಿದ್ದ ಶಿಕ್ಷಕರ ಹೆಸರು ರಾಮರಾಯ. ಇವರ ಪ್ರಾಯ ಮೂವತ್ತು ವರ್ಷದ್ದು. ಇವರು ಧರ್ಮದಲ್ಲಿ ಶ್ರದ್ಧೆಯುಳ್ಳವರು, ಕರ್ಮನಿಷ್ಠರು ಇದ್ದರು. ಬೆಳಗಿನ ಜಾವ ದಲ್ಲಿ ಎದ್ದು ಹೊಳೆಗೆ ಹೋಗಿ ಜಳಕ ಮಾಡಿ ಸಂಧ್ಯಾವಂದನೆ ಮುಗಿಸಿ ಸಾಲೆಗೆ ಹೋಗುವರು. ನಾಲ್ಕು ತಾಸು ಹೊತ್ತೇರಿದ ಮೇಲೆ ಸಾಲೆಗೆ ಬಿಡುವು. ಮಧ್ಯಾಹ್ನ ಊಟ ಮುಗಿದ ಮೇಲೆ ನೂಲುವರು. ತಾವೆ ನೂತ ನೂಲಿನಿಂದ ತಮಗೂ ತಮ್ಮ ಹೆಂಡತಿಯಾದ ಸೀತಾಬಾಯಿ ಯಗೂ ಅರಿವೆ ನೇಯಿಸಿಕೊಳ್ಳುತ್ತಿದ್ದರು. ಗಂಡ ನೂತ ನೂಲಿನ ಸೀರೆಯನ್ನು ಹೆಂಡತಿ ಅಭಿಮಾನದಿಂದ ತೊಡುವಳು. ಹೆಂಡತಿ ಮಾಡಿದ ಅಡಿಗೆ ಗಂಡ ಪ್ರೀತಿಯಿಂದ ಉಣ್ಣುವನು. ನೂತ ಮೇಲೆ ಕೆಲ ಪುಸ್ತಕ ಗಳನ್ನು ಓದುತ್ತಿದ್ದರು. ಮತ್ತೆ ಮಧ್ಯಾಹ್ನ ಸಾಲೆ. ಸೂರ್ಯಾಸ್ತ ವಾದೊಡನ ಸಾಲೆಗೆ ಬಿಡುವು. ಆಮೇಲೆ ಹುಡುಗರನ್ನೆಲ್ಲ ನದಿಯ ದಂಡೆಯ ಮೇಲೆ ಆಡಲಿಕ್ಕೆ ಕರೆದುಕೊಂಡು ಹೋಗುವರು. ಹುಡುಗರ ಆಟ ಮುಗಿದ ಮೇಲೆ ಸಂಧ್ಯಾವಂದನೆ ಮಾಡಿ ಮನೆಗೆ ಹೋಗಿ ಊಟ ಮಾಡು ವರು. ರಾತ್ರಿ ಗುಡಿಯಲ್ಲಿ ಪುರಾಣ ಅಥವಾ ಕೀರ್ತನ ಮಾಡುವರು. ಹೀಗಿತ್ತು ರಾಮರಾಯರ ಜೀವನಕ್ರಮ.

ರಾಮರಾಯರಿಗೆ ಒಬ್ಬ ಮಗ. ಅವನ ಹೆಸರು ಗೋಪಾಲ. ಅವನು ಒಂದುವರೆ ವರ್ಷದವನಿದ್ದ. ಅವನು ಬಹಳ ಚಪಲ; ಅವನ ಚಲ್ಲಾಟ ಕ್ಕಂತೂ ಮಿತಿಯೇ ಇರಲಿಲ್ಲ. ಮನೆಯಲ್ಲಿ ಒಂದು ನಿಮಿಷ ಸಹ ಇರುತ್ತಿ ದ್ದಿಲ್ಲ. ಈ ಹುಡುಗನ ಹುಟ್ಟಿದ ಹಬ್ಬದ ದಿವಸ ಊರ ಗೌಡರು ಹೊನ್ನಿನ ಸರಪಳಿ ಮಾಡಿಸಿ ಕೊಟ್ಟರು. “ ಬ್ರಾಹ್ಮಣರ ಒಡವೆ ಎಂದರೆ ಜ್ಞಾನ, ಶೀಲ; ಮುತ್ತು ಹವಳ ಹೊನ್ನು ಅಲ್ಲ. ಬೇಡ ನನಗೆ ಇದು ” ಎಂದು ಹೇಳಿ ರಾಮರಾಯರು ತಿರುಗಿ ಕೊಟ್ಟರು.

ರಾಮರಾಯರ ಮನಸ್ಸು ಉದಾರ, ದೃಷ್ಟಿ ವಿಶಾಲ. ರಾಮರಾಯರಿಗೆ ಜ್ವರ ಬರತೊಡಗಿದವು. ಸಾಲೆ ಬಂದಾಯಿತು. ಕಾಯಿಲೆ ಕಡಿಮೆಯಾಗ–

ಲಿಲ್ಲ. ದಿನದಿನಕ್ಕೆ ಬಲಿಯಲಾರಂಭಿಸಿತು. ಸೀತಾಬಾಯಿಗೆ ಬಹಳ ಚಿಂತೆ. ಒಂದು ದಿನವಂತೂ ಅವರು ಬಿಕ್ಕಿ ಬಿಕ್ಕಿ ಅಳತೊಡಗಿದರು. ರಾಮರಾಯರು ಅವರನ್ನು ತಮ್ಮ ಹತ್ತಿರ ಬರಲು ಹೇಳಿದರು. ಅಲ್ಲಿಯೇ ಅವರನ್ನು ಕೂಡ್ರಿಸಿಕೊಂಡು ಅವರ ತೊಡೆಯ ಮೇಲೆ ತಮ್ಮ ತಲೆ ಇರಿಸಿ ಹೇಳಿದರು "ಸಾವು ಯಾರಿಗೂ ಬಿಟ್ಟಿದ್ದಲ್ಲ. ಇದಕ್ಕಾಗಿ ಇಷ್ಟು ದುಃಖವೇಕೆ? ನಾನು ಗೀತೆಯಲ್ಲಿ ಭಗವಂತನು ಹೇಳಿದ್ದನ್ನು ಓದಿ, ತಿಳಿಸಿ ಹೇಳಿಲ್ಲವೇ? ನಿನ್ನ ಕಂಬನಿ ನೋಡಿ ನನಗೆ ದುಃಖವೆನಿಸುತ್ತದೆ. ಗೋಪಾಲನಿದ್ದಾನೆ. ಅವನನ್ನು ಜೋಪಾನ ಮಾಡು, ಬೆಳಿಸು. ದೇವರಿದ್ದಾನೆ ಎಲ್ಲರಿಗಾಗಿ. ಗಿಳಿಗೆ ಬಣ್ಣ, ನವಿಲಿಗೆ ಗರಿ, ಕೋಗಿಲೆಗೆ ಕಂಠ ಅವನಲ್ಲವೇ ಕೊಟ್ಟಿದ್ದು. ಕನಕದಾಸರು ಹೇಳಿದ್ದಾರಲ್ಲ "ಪುಟ್ಟಿಸಿದ ಸ್ವಾಮಿ ತಾ ಹೊಣೆಗಾರನಾದ ಮೇಲೆ ಘಟ್ಟಿಯಾಗಿ ಸಲಹುವನು ಇದಕೆ ಸಂದೇಹ ಬೇಡ." ನಾನು ಇರುವದು ಒಂದೆರಡು ದಿನ. ನನಗೆ ಕರೆ ಬಂದಿದೆ. ನಾನು ಹೋಗಲೇಬೇಕು. ನೀನು ಶಾಂತ ಮತ್ತು ಸಮಾಧಾನದಿಂದಿದ್ದರೆ ನಾನು ಸುಖದಿಂದ ಸಾಯುವೆ. ನೀನು ಕಣ್ಣೀರು ಸುರಿಸುತ್ತಿದ್ದರೆ ನಾನು ಸಮಾಧಾನದಿಂದ ಸಾಯುವದೆಂತು? ನನ್ನ ಶಾಂತಿ ನಿನ್ನ ಕೈಯಲ್ಲಿದೆ. ಒರೆಸು! ಕಂಬನಿ ಒರೆಸು! ಅಳುವದೆಂದರೆ ದೇವರ ಅವಮಾನ. ಅವನು ಕೊಟ್ಟ ಕರೆಯ ಅವಮಾನ. ಅವನ ಇಚ್ಛೆಗೆ ನಾವು ತಲೆ ಬಾಗಿಸಬೇಕು, ಅಲ್ಲವೇ?"

ಸೀತಾಬಾಯಿ ಸಮಾಧಾನ ತಾಳಿ ಕೇಳುತ್ತಿದ್ದಳು. ಕಣ್ಣೀರು ಒರಿಸಿದಳು. ತಿರುಗಿ ಕಂಬನಿ ಬರಗೊಡಲಿಲ್ಲ. ಆಳವಾದ ಹೊಳೆಯಂತೆ ಶಾಂತ ಮತ್ತು ಗಂಭೀರಳಾದಳು. "ವೆಂಕಟೇಶನ ಸ್ತೋತ್ರವನ್ನು ಅನ್ನು ಎಂದು ರಾಮರಾಯರು ಹೇಳುವರು. ಸೀತಾಬಾಯಿ ಅನ್ನುತ್ತಿದ್ದಳು ಮತ್ತು ರಾಮರಾಯರು ಕೇಳುತ್ತಿದ್ದರು.

ಈ ರೀತಿ ಕೆಲದಿನಗಳಾದ ಮೇಲೆ ರಾಮರಾಯರು ಮೃತಪಟ್ಟರು. ಸೀತಾಬಾಯಿಯ ಭಾಗ್ಯ ಹೋಯಿತು. ಗೋಪಾಲನನ್ನು ಅಪ್ಪಿಕೊಂಡು ಅತ್ತಳು. ಆದರೆ ಗಂಡನು ಆಡಿದ ಮಾತನ್ನು ನೆನಪಿಗೆ ತಂದು ಮನಸ್ಸನ್ನು

ಶಾಂತಗೊಳಿಸಿದಳು. ಅವರ ಆತ್ಮ ತನ್ನ ಸುತ್ತಮುತ್ತಲು ಸುಳಿದಾಡು ತ್ತಿರಬೇಕು. ನಾನು ಕಣ್ಣೀರು ಸುರಿಸಿದರೆ ಅವರ ಆತ್ಮಕ್ಕೆ ಶಾಂತಿ ದೊರೆಯ ಲಿಕ್ಕಿಲ್ಲೆಂದು ತಿಳಿದು ಮತ್ತೆ ಕಂಬನಿ ಒರೆಸಿಕೊಳ್ಳುತ್ತಿದ್ದಳು.

ಹೊನ್ನಾಪುರದ ಜನರೆಲ್ಲ ಮಿಡುಗಿದರು. ಊರ ಸಾಲೆ ಮತ್ತೆ ಸುರು ವಾಗಲಿಲ್ಲ. ಮತ್ತೊಬ್ಬ ಶಿಕ್ಷಕ ಸಿಕ್ಕುವ ವರೆಗೆ ಅದು ಬಂದು ಇರುವದು. ಹೊನ್ನಾಪುರದ ಹುಡುಗರು ಒಂದು ಹರದಾರಿ ದೂರವಿದ್ದ ಒಂದು ಹಳ್ಳಿಯ ಸಾಲೆಗೆ ಹೋಗತೊಡಗಿದರು. ಚಿಕ್ಕ ಬಾಲಕರು ಹೋಗುತ್ತಿದ್ದಿಲ್ಲ. ಹಾದಿ ಯಲ್ಲಿ ಅಡವಿ ಇತ್ತು. ಅವರಿಗೆಲ್ಲಿಯ ಅಂಜಿಕೆ?

ಸೀತಾಬಾಯಿಯ ಪರಿಸ್ಥಿತಿ ಕೆಟ್ಟಿತು. ರಾಮರಾಯರು ಇರುವ ವರೆಗೆ ಹಳ್ಳಿಯ ಜನ ಸಹಾಯ ಮಾಡುತ್ತಿದ್ದರು. ಈಗ ಅವಳಿಗೆ ದುಡಿದೇ ಉಪಜೀವನ ಮಾಡುವ ಪ್ರಸಂಗ ಬಂದಿತು. ಅವಳು ನೆರೆಹೊರೆಯವರ ಮನೆಯಲ್ಲಿ ಬೀಸುವದು, ಕುಟ್ಟುವದು, ನೂಲುವದು ಇವೇ ಮೊದಲಾದ ಕೆಲಸಗಳನ್ನು ಮಾಡಿ ತನ್ನ ಮತ್ತು ಗೋಪಾಲನ ಉಪಜೀವನ ಸಾಗಿಸು ತ್ತಿದ್ದಳು. ಗೋಪಾಲನನ್ನು ನೋಡಿದರೆ ಅವಳಿಗೆ ಎಲ್ಲ ಕಷ್ಟನಷ್ಟಗಳ ಮರೆವು ಆಗುತ್ತಿತ್ತು. ಅವನನ್ನು ಅಪ್ಪಿಕೊಂಡು "ನನ್ನ ಮಗು ದೊಡ್ಡವ-ನಾದ ಮೇಲೆ ನನ್ನ ಕಷ್ಟಗಳೆಲ್ಲ ದೂರಾಗುವವು" ಎಂದು ಅನ್ನುವಳು.

ಗೋಪಾಲ ಈಗ ಆರು ವರ್ಷದವನಾದ. ಇನ್ನು ಅವನನ್ನು ಸಾಲೆಗೆ ಕಳಿಸಬೇಕೆಂಬ ವಿಚಾರ ಮಾಡಿದಳು ತಾಯಿ. ಈ ವರ್ಷದ ದಸರೆಯ ದಿವಸ ಮುಹೂರ್ತ ಮಾಡಿ ಸಾಲೆಗೆ ಕಳಿಸಬೇಕೆಂದು ನಿಶ್ಚಯಿಸಿದಳು. ಮೂರು ದಿವಸ ದಸರೆ ಇತ್ತು. ಆಗ ತಾಯಿ ತನ್ನ ಹತ್ತರ ಗೋಪಾಲ ನನ್ನು ಕೂಡಿಸಿಕೊಂಡು ಹೇಳಿದಳು "ಮಗು ನಾಳೆ ದಸರೆಹಬ್ಬ. ನೀನು ನಾಳೆಯಿಂದ ಸಾಲೆಗೆ ಹೋಗಬೇಕು. ನಾನು ನೂತ ನೂಲಿನಿಂದ ಅರಿವೆ ನೇಯಿಸಿ ನಿನಗಾಗಿ ಹೊಸ ಅಂಗಿ ತಯಾರಿಸಿದ್ದೇನೆ. ಆ ಅಂಗಿ ತೊಟ್ಟು ನೀನು ಸಾಲೆಗೆ ಹೋಗಬೇಕು. ನಿನಗಾಗಿ ಕಟ್ಟಿಗೆಯ ಧೂಳಿಪಾಟಿ ಮಾಡಿಸಿದ್ದೇನೆ. ಅದನ್ನು ತಕ್ಕೊಂಡು ಹೋಗಿ, ಪಾಟಿಯ ಮೇಲೆ ಧೂಳಿಯನ್ನು ಪಸರಿಸಿ

ಬಿದಿರು ಕಡ್ಡಿಯಿಂದ ಅಕ್ಷರ ತೆಗೆಯಲು ಪ್ರಾರಂಭಿಸು. ಒಂದು ಅಕ್ಷರ ಬರೆ. ಬಳಿಕ ಅದನ್ನು ಅಳಿಕಿಸಿ ಮತ್ತೊಂದು ಅಕ್ಷರ ಕಲಿ. ಹೀಗೆ ಹೊಸ ಹೊಸ ಅಕ್ಷರಗಳನ್ನು ಕಲಿಯಬೇಕು. ಸಾಲೆ ಸ್ವಲ್ಪ ದೂರ ಇದೆ. ಆದರೆ ಆ ಶಿಕ್ಷಕರು ಬಹಳ ಒಳ್ಳೆಯವರು. ನೀನು ಅವರಲ್ಲಿಗೆ ಹೋಗಿ ಕಲಿ ಮತ್ತು ಕಲಿತು ವಿದ್ವಾಂಸನಾಗು. ವಿದ್ಯೆಯೇ ನಿಜವಾದ ಧನ. ಅದೇ ನಿಜವಾದ ಮಾನ. ಸಾಲೆಗೆ ಹೋಗುತ್ತೀ ತಾನೆ?"

ಗೋಪಾಲ ಅಂದ "ಅಮ್ಮಾ, ನಾನು ಸಾಲೆಗೆ ಹೋಗುತ್ತೇನೆ. ನಮ್ಮ ಯಜಮಾನರಂತೆ ವಿದ್ವತ್ತು ಸಂಪಾದಿಸುವೆ"

ಸೀತಾಬಾಯಿ "ಗೊತ್ತು ನನಗೆ ಕಂದಾ, ನೀನು ನಿಜವಾಗಿಯೂ ಜಾಣ" ಎಂದು ನುಡಿದಳು.

ಮರುದಿವಸ ಅವನನ್ನು ಬೆಳಗಿನಲ್ಲಿ ಎಬ್ಬಿಸಿ, ಸ್ನಾನಮಾಡಿಸಿದಳು. ಗೋಪಾಲ ಸ್ನಾನಮಾಡಿ ಸೂರ್ಯನಮಸ್ಕಾರ ಹಾಕಿದ. ಹಣೆಗೆ ಗಂಧ ಹಚ್ಚಿಕೊಂಡ. ವಿದ್ಯಾದೇವಿಯ ಪೂಜೆಮಾಡಿದ.

ಗೋಪಾಲ ಸಾಲೆಗೆ ಹೊರಟ. ಅವನು ಹೊರಟುದನ್ನು ನೋಡಿ ಸೀತಾಬಾಯಿಗೆ ಅಳುವು ನಿಲ್ಲಲೊಲ್ಲದು. ರಾಮರಾಯರು ಇದ್ದರೆ ಮನೆಯಲ್ಲೆ ಕಲಿಯುತ್ತಿದ್ದನಲ್ಲ, ಇಷ್ಟು ದೂರ ಹೋಗ ಬೇಕಾಗುತ್ತಿದ್ದಿಲ್ಲ. ಹೀಗೆ ಸೀತಾಬಾಯಿಯ ಮನಸ್ಸಿನಲ್ಲಿ ವಿಚಾರಗಳು ಸುಳಿದಾಡಿದವು. ನಂತರ ಸೆರಗಿನಿಂದ ಕಣ್ಣೀರು ಒರೆಸಿಕೊಂಡು ಕೆಲಸಕ್ಕೆ ತೊಡಗಿದಳು. ಬಡವರಿಗೆ ಅಳಲು ಸಾಕಷ್ಟು ಸಮಯ ಸಹ ಸಿಕ್ಕುವದಿಲ್ಲ. ಇದೂ ಒಂದು ರೀತಿಯಿಂದ ಗುಣವೇ.

ಗೋಪಾಲ ಸಾಲೆಗೆ ಹೋದ. ಶಿಕ್ಷಕರು 'ಯಾರ ಮಗ?' ಎಂದು ಕೇಳಿದರು.

ರಾಮರಾಯರ ಪರಿಚಯ ಅವರಿಗಿತ್ತು. ಅವರ ಮಗನಿಗೆ ಕಲಿಸುವ ಸಂಧಿ ಬಂದಿತೆಂದು ಆನಂದಪಟ್ಟರು. "ದಿನಾಲು ಸಾಲೆಗೆ ಬಾ. ನಿಮ್ಮ ಹಿರಿಯರ ಕೀರ್ತಿ ಹೆಚ್ಚಿಸು" ಎಂದು ಗೋಪಾಲನಿಗೆ ಆಶೀರ್ವದಿಸಿ ಹೇಳಿದರು.

ಗೋಪಾಲ ಮನೆಗೆ ಬಂದ. ತಾಯಿ ಸಮಾಚಾರ ಕೇಳಿದಳು.

ಗೋಪಾಲ ಹೇಳಿದ "ಸಾಲೆ ಚೆನ್ನಾಗಿದೆ. ಶಿಕ್ಷಕರೂ ಒಳ್ಳೆಯವರು. ನನ್ನ ಬೆನ್ನು ಚಪ್ಪರಿಸಿದರು ಮತ್ತು ಜಾಣನಾಗೆಂದು ಆಶೀರ್ವಾದ ಮಾಡಿದರು."

ಸಂಜೆಯಾಯಿತು. ಸೀತಾಬಾಯಿ ಗೋಪಾಲನಿಂದ ಅಂಕಿ-ಮಗ್ಗಿ ಅನಿಸಿದರು. ರಾಮರಕ್ಷೆ ಸ್ತೋತ್ರ ಕಲಿಸಿದರು. ಗೋಪಾಲ ಊಟ ಮಾಡಿ ಮಲಗಿದ. ಸೀತಾಬಾಯಿ ರಾಮರಾಯರ ನೆನಪಾದ ರುದ್ರಾಕ್ಷಿ ಮಾಲೆಯನ್ನು ತಕ್ಕೊಂಡು ಜಪಮಾಡುತ್ತ ಕುಳಿತಳು. ಜಪಮಾಲೆಯೊಡನೆ ಕಂಬನಿಗಳ ಮಾಲೆಯೂ ನಡೆದೇ ಇತ್ತು.

ಒಂದೆರಡು ದಿನಗಳಾದವು. ಒಂದು ದಿನ ಗೋಪಾಲ ತಾಯಿಗೆ ಎಂದ ''ಅಮ್ಮಾ ನಾನು ಸಾಲೆಗೆ ಹೋಗುವದಿಲ್ಲ" ತಾಯಿ ಎಂದಳು ''ಏಕೆ? ಹೀಗೆ ಮಾಡಬಾರದು ಕಂದ, ನೀನು ಕಲಿಯಬೇಕು. ವಿದ್ಯಾವಂತನಾಗಬೇಕು" ಏನು ಹೇಳಿದರೂ ಹೋಗುವದಿಲ್ಲೆಂದು ಮಗ ಹಟತೊಟ್ಟ. ತಾಯಿ ಕಾರಣ ಹೇಳು ಅಂದಳು. ಗೋಪಾಲ ಹೇಳಿದ "ಸಂಜೆ ಸಾಲೆಯಿಂದ ತಿರುಗಿ ಬರುವಾಗ ಎಲ್ಲ ಹುಡುಗರು ಮುಂದೆ ಹೋಗಿಬಿಡುತ್ತಾರೆ ಮತ್ತು ನನಗೊಬ್ಬನಿಗೆ ಅಡವಿಯಲ್ಲಿ ಬರಲು ಭಯ ಬರುತ್ತದೆ."

ಸೀತಾಬಾಯಿ ದೇವರ ಮೇಲೆ ಭರವಸೆ ಇಟ್ಟು ''ಗೋಪಾಲ, ಅದೇಕೆ ಅಡವಿಯಲ್ಲಿ ನಿನಗೆ ಅಂಜಿಕೆ? ಅಡವಿಯಲ್ಲಿ ನಿನ್ನ ಅಣ್ಣನೊಬ್ಬ

ಇದ್ದಾನೆ. ನಿನಗೆ ಭಯ ಬಂದಾಗ 'ಅಣ್ಣ ಅಣ್ಣ' ಎಂದು ಕೂಗು. ಅವನು ಬಂದು ನಿನ್ನನ್ನು ಮನೆಯ ವರೆಗೆ ಮುಟ್ಟಿಸಿ ಹೋಗುವನು" ಎಂದು ನುಡಿದಳು.

ಗೋಪಾಲ "ಏನು ನನ್ನ ಅಣ್ಣ ಇದ್ದಾನೇನಮ್ಮಾ? ಇಷ್ಟು ದಿವಸ ನೀನೇಕೆ ನನಕೆ ಹೇಳಲಿಲ್ಲ? ಅವನು ಮನೆಗೇಕೆ ಬರುವದಿಲ್ಲ?" ಎಂದು ಕೇಳಿದ.

ಸೀತಾಬಾಯಿ "ಮಗು, ಅವನಿಗೆ ಕೆಲಸ ಬಹಳ. ಅವನ ಯಜಮಾನ ಕೋಪಿಷ್ಠ. ಮನೆಗೆ ಬರಲು ಅವನಿಗೆ ಬಿಡುವೇ ಇಲ್ಲ. ನೀನು ಕರೆದರೆ ನಿನಗಾಗಿ ಸ್ವಲ್ಪ ಹೊತ್ತು ಬರುವನು "ಎಂದು ಹೇಳಿದಳು.

ಗೋಪಾಲ ಒಳ್ಳೇ ಕುತೂಹಲದಿಂದ ಓಡುತ್ತಹೋದ. ಅಣ್ಣನನ್ನು ಯಾವಾಗ ಕಾಣುವೆನೊ ಎಂದಾಗಿತ್ತು ಅವನಿಗೆ. ಅಡವಿಯಹತ್ತಿರ ಬಂದು "ಅಣ್ಣಾ ಅಣ್ಣಾ" ಎಂದು ಕೂಗಿದ. ಯಾರು ಬರುತ್ತಾರೆ ಎಂದು ನೋಡುತ್ತ ನಿಂತ. ಅದೇನು ಆಶ್ಚರ್ಯ !

ಬಳ್ಳಿ ಅಲ್ಲಾಡಿದವು. ಕಪ್ಪು ಮೂರ್ತಿಯೊಂದು ತಲೆದೋರಿತು. ತಲೆಯ ಮೇಲೆ ನವಿಲು ಗರಿಯ ಮುಗುಟ. ಹೆಗಲ ಮೇಲೆ ಕಂಬಳಿ, ಕೈಯಲ್ಲಿ ಬಡಿಗೆ. ಕೊರಳಲ್ಲಿ ಹೂವಿನಹಾರ, ಬಾಯಿಯಲ್ಲಿ ಕೊಳಲು. ಅಣ್ಣ ಬಂದ, ಕೊಳಲನ್ನೂದುತ್ತ ಬಂದ. ಗೋಪಾಲನಿಗೆ ಆನಂದವಾಯಿತು. ಅವನು ಬೇಗನಾಗಿ ಅಣ್ಣನ ಕೈಹಿಡಿದು ನಡೆದಿದ್ದ.

ಅಣ್ಣ "ಗೋಪಾಲ, ನಾನು ಹೋಗುತ್ತೇನೆ. ನಿನಗೆ ಭಯ ಬಂದರೆ ನನ್ನನ್ನು ಕರೆ, ನಾನು ಬರುತ್ತೇನೆ" ಎಂದು ಊರು ಬರುವ ವರೆಗೆ ಗೋಪಾಲನನ್ನು ತಂದು ಮುಟ್ಟಿಸಿದ.

ಗೋಪಾಲ ಮನೆಗೆ ಬಂದು "ಅಮ್ಮಾ! ಅಣ್ಣ ಎಷ್ಟು ಒಳ್ಳೆಯವ! ಅವನು ಕೊಳಲು ಎಷ್ಟು ಸೊಗಸಾಗಿ ಬಾರಿಸುತ್ತಾನೆ! ತಲೆಯ ಮೇಲೆ

ನವಿಲುಗರಿಯ ಮುಗುಟ ಹಾಕಿದ್ದಾನೆ. ನನಗೆ ನವಿಲಗರಿ ಕೊಡುತ್ತೇನೆ ಎಂದು ಹೇಳಿದ್ದಾನೆ. ಇನ್ನು ನಾನು ದಿನಾಲು ಸಾಲೆಗೆ ಹೋಗುತ್ತೇನೆ. ಎಂದು ನುಡಿದ. ತಾಯಿಯ ಕಣ್ಣಲ್ಲಿ ನೀರು ಸುರಿಯ ತೊಡಗಿದವು. "ನನಗಾಗಿ ಎಷ್ಟು ಶ್ರಮಿಸುವಿ ದೇವಾ" ಎಂದು ನುಡಿದು "ದೇವರು ಅರ್ಜುನನಿಗಾಗಿ ಕುದುರೆಯ ಚಾಕರಿ ಮಾಡಿದ, ದಾಮಾಜಿಗಾಗಿ ಹೊಲೆಯನಾದ, ದ್ರೌಪದಿಗೆ ಸೀರೆ ಪೂರೈಸಿದ. ದೇವಾ, ನನ್ನಂಥ ಪಾಮರಳಿಗಾಗಿ ನೀನು ಧಾವಿಸಿ ಬಂದೆಯಾ? ನಿನ್ನ ಹೊರ್ತು ನನಗೆ ಯಾರಿದ್ದಾರೆ ಇಂದು?" ಎಂದುಕೊಂಡಳು ಸೀತಾಬಾಯಿ.

ಗೋಪಾಲನ ಸಾಲೆಯ ಶಿಕ್ಷಕರು ಹುಡುಗರೆಲ್ಲರಿಗೂ ಒಂದು ದಿನ ಹೇಳಿದರು "ಹುಡುಗರೇ! ನನ್ನ ಮನೆಯಲ್ಲಿ ಉಪನಯನ. ನೀವೆಲ್ಲರು ನಿಮ್ಮ ನಿಮ್ಮ ತಾಯಿ ತಂದೆಯವರಿಗೆ ಹೇಳಿ ನನಗೆ ಸಹಾಯ ಮಾಡಬೇಕು ಮತ್ತು ಆ ಕಾರ್ಯಕ್ಕೆ ನೆರವಾಗಬೇಕು."

ಗೋಪಾಲ ಮನೆಗೆ ಬಂದು "ಅಮ್ಮಾ, ನಮ್ಮ ಮಾಸ್ತರರ ಮನೆಯಲ್ಲಿ ಉಪನಯನ. ನಾವೇನಾದರೂ ಕೊಡಬೇಕಂತೆ. ಏನಾದರೂ ಕೊಡು ಅಮ್ಮಾ." ಎಂದ.

ತಾಯಿ "ನಾವು ಬಡವರು. ನಮ್ಮ ಮನೆಯಲ್ಲಿ ಏನಿದೆ ಕೊಡುವಂಥಹದು?" ಎಂದಳು.

"ಏನಾದರೂ ಕೊಡು. ಇಲ್ಲದಿದ್ದರೆ ಹುಡುಗರೆಲ್ಲರು ನನ್ನ ಉಪ-ಹಾಸ ಮಾಡುವರು."

"ಹೋಗು ನಿನ್ನ ಅಣ್ಣನ ಬಳಿಯಲ್ಲಿ. ಅವನು ಏನಾದರೂ ಕೊಡಬಹುದು." ಎಂದ ತಾಯಿಯ ಮಾತು ಕೇಳಿ ಗೋಪಾಲನೆಂದ "ಹೌದು ನಿಜ, ಅಣ್ಣ ಏನಾದರೂ ವಿಲಕ್ಷಣ ವಸ್ತು ಕೊಡುವನು."

ಬಳಿಕ ಗೋಪಾಲ ಅಣ್ಣನಿದ್ದಲ್ಲಿ ಬಂದು ಗುರುಗಳಿಗೆ ಉಪನಯನದ ಕಾಲಕ್ಕೆ ನೆರವಾಗುವಂಥಹ ಏನಾದರೊಂದನ್ನು ಕೊಡಲು ಅವನಿಗೆ ಕೇಳಿದ. ಅಣ್ಣ ಅಂದ "ನಾನು ದನಕಾಯುವವ, ನನ್ನ ಹತ್ತಿರವೇನಿದೆ!"

ಗೋಪಾಲ ಅಂದ. "ಮನೆಯಲ್ಲಿ ಕೇಳಿದರೆ ತಾಯಿ ಏನೂ ಇಲ್ಲ, ಅಣ್ಣನಿಗೆ ಕೇಳು ಅಂದಳು. ನಿನ್ನನ್ನು ಕೇಳಲು ನೀನೂ ಏನೂ ಇಲ್ಲ ಅನ್ನುತ್ತೀ. ಅಪ್ಪ ಇದ್ದರೆ ಏನಾದರೂ ಕೊಟ್ಟೇ ಇರುತಿದ್ದ. ಕೊಡು, ಇಲ್ಲದಿದ್ದರೆ ನಾನು ಅಳುತ್ತ ಇಲ್ಲೇ ಕೂಡ್ರುವೆ."

"ಅಳಬೇಡ ತಮ್ಮಾ! ನನ್ನ ಹತ್ತಿರ ಒಂದು ಮೊಸರ ಗಡಿಗೆ ಇದೆ. ಕೊಡುತ್ತೇನೆ. ತಕ್ಕೊಂಡು ಹೋಗುತ್ತೀಯಾ?" ಅಂದ ಅಣ್ಣ. ಗೋಪಾಲ ಒಪ್ಪಿ, ಆ ಗಡಿಗೆಯನ್ನು ತೆಗೆದುಕೊಂಡು ಹೋದ.

ಸಾಲೆಗೆ ಗೋಪಾಲ ಹೋದ. ಅಲ್ಲಿ ಹುಡುಗರು ಮುಕ್ಕರಿದ್ದರು. ತೋಟಿಗನ ಮಗ ಬಾಳೆಯ ಗೊಂಚಲ ತಂದಿದ್ದ. ಊರ ಶೆಟ್ಟರ ಮಗ ಇಪ್ಪತ್ತೈದು ರೂಪಾಯಿ ತಂದಿದ್ದ. ಮಿಠಾಯಿಗಾರನ ಮಗ ಪೇಡೆ ತಂದಿದ್ದ. ಅರಿವೆ ಅಂಗಡಿಯವನು ಒಂದು-ಎರಡು ಥಾನು ಅರಿವೆ ಕಳಿಸಿದ್ದ. ಶಿಕ್ಷಕರು ಎಲ್ಲವನ್ನು ಒಳ್ಳೆ ಆದರದಿಂದ ಸ್ವೀಕರಿಸುತ್ತಿದ್ದರು. ಗೋಪಾಲನ ಕಡೆಗೆ ನೋಡುವವರು ಯಾರೂ ಇದ್ದಿಲ್ಲ. ಕೈಯಲ್ಲಿ ಮೊಸರು ಗಡಿಗೆ ಹಿಡಿದುಕೊಂಡು ಬಿಕ್ಕಿ ಬಿಕ್ಕಿ ಅಳುತ್ತಿದ್ದ.

ಎಲ್ಲರೂ ತಂದ ಕಾಣಿಕೆ ತಕ್ಕೊಳ್ಳುವದು ಮುಗಿದ ಬಳಿಕ ಮಾಸ್ತರರ ಲಕ್ಷ್ಯ ಗೋಪಾಲನತ್ತ ಹೋಯಿತು. ಅವರು "ಅಳುವದೇಕೆ?" ಎಂದು ಕೇಳಿದರು. ಗೋಪಾಲನೆಂದ "ನನ್ನ ಗಡಿಗೆ ಯಾರೂ ತಕ್ಕೊಳ್ಳಲೊಲ್ಲರು." "ಏನಿದೆ ಅದರಲ್ಲಿ?" ಎಂದು ಶಿಕ್ಷಕರು ಕೇಳಿದರು. "ಮೊಸರು" ಅಂದ ಗೋಪಾಲ. "ತಾ, ಇಲ್ಲಿ" ಎಂದು ಮಾಸ್ತರರು ತಕ್ಕೊಂಡು ಮತ್ತು ಒಂದು ಪಾತ್ರೆಯಲ್ಲಿ ಸುರುವಿದರು. ಆದರೆ ಒಂದು ಚಮತ್ಕಾರವೆ ಆಯಿತು. ಎಷ್ಟು ಬಾರಿ ಸುರುವಿದರೂ ಗಡಿಗೆ ತುಂಬಿದ್ದೇ ಇರುತ್ತಿತ್ತು. ಅಂದು ಇಡಿ ಊರವರೆಲ್ಲ ಒಳ್ಳೇ ರುಚಿಯಿಂದ ಬೇಸರ ಅನಿಸದೆ ಮೊಸರು ಕುಡಿದೇ ಕುಡಿದರು. ಮೊಸರು ಅಮೃತದಂತೆ ಇತ್ತು. ಎಲ್ಲರಿಗೂ ಆಶ್ಚರ್ಯ.

ಶಿಕ್ಷಕರು ಗೋಪಾಲನನ್ನು ಕೇಳಿದರು "ಗೋಪಾಲ, ಮೊಸರು ಗಡಿಗೆ ನಿನಗೆ ಕೊಟ್ಟವರಾರು?" "ನನ್ನ ಅಣ್ಣ" ಎಂದು ಗೋಪಾಲ ಹೇಳಿದ. "ನಿನ್ನಣ್ಣನನ್ನು ನನಗೆ ತೋರಿಸುವಿಯಾ?" ಎಂದು ಕೇಳಿದರು ಮಾಸ್ತರರು. ಆನಂದದಿಂದ ಗೋಪಾಲ ಒಡಂಬಟ್ಟು "ನನ್ನ ಅಣ್ಣ ಬಹಳ ಒಳ್ಳೆಯವ. ಆತನ ತಲೆಯ ಮೇಲೆ ನವಿಲುಗರಿಯ ಮುಗುಟ, ಹೆಗಲ ಮೇಲೆ ಕಂಬಳಿ, ಕೈಯಲ್ಲಿ ಕೋಲು, ಕೊಳಲು ಇರುತ್ತವೆ ಯಾವಾಗಲೂ ಸೊಗಸಾಗಿ ಕೊಳಲು ಊದುತ್ತ ಇರುತ್ತಾನೆ. ನಿಮಗಾದರೂ ಅವನು ಬಹಳ ಸೇರುವನು" ಅಂದ.

ಸಂಜೆಯಾಯಿತು. ಹುಡುಗರೆಲ್ಲ ತಮ್ಮ ತಮ್ಮ ಮನೆಗೆ ತೆರಳಿದರು. ಗೋಪಾಲ ಮತ್ತು ಅವನ ಶಿಕ್ಷಕರು ಹೊರಟರು. "ಗೋಪಾಲ ನಿಜವಾಗಿ ಹೇಳು ನಿನಗೆ ಗಡಿಗೆ ಕೊಟ್ಟವರಾರು?" ಎಂದು ಗುರುಗಳು ಮತ್ತೆ ಕೇಳಿದರು. "ನಿಜವೆಂದರೇನು? ಇಲ್ಲಿಯ ವರೆಗೆ ನಿಮಗೆ ನಾನು ಸುಳ್ಳು ಹೇಳಿದ್ದೇನೆಯೇ? ನನ್ನ ತಾಯಿ ನನಗೆ ಯಾವಾಗಲೂ ಸತ್ಯವನ್ನೇ ಆಡಲು ಹೇಳಿದ್ದಾಳೆ. ನಾನು ಸುಳ್ಳು ಆಡಿದರೆ ನನ್ನ ತಾಯಿಗೆ ವ್ಯಥೆಯಾದೀತು. ನಿಜವಾಗಿ ನನ್ನ ಅಣ್ಣ ನನಗೆ ಕೊಟ್ಟಿದ್ದಾನೆ." ಎಂದು ಗೋಪಾಲ ಹೇಳಿದ.

ಮಾಸ್ತರ "ನಿನ್ನ ಅಣ್ಣ ಇರುವದೆಲ್ಲಿ?" ಎಂದು ಕೇಳಿದರು.

ಗೋಪಾಲ ಉತ್ತರವಿತ್ತ "ಆ ಮಾವಿನ ತೋಪಿನಲ್ಲಿ. ಹಳ್ಳದ ದಂಡೆಯ ಮೇಲಿದ್ದ ಅಡವಿಯಲ್ಲಿ. ಅಲ್ಲಿ ಅವನು ಆಕಳ ಕಾಯುತ್ತಾನೆ, ಮೇಯಿಸುತ್ತಾನೆ. ಅವನಿಗೆ ಕೆಲಸ ಬಹಳ. ಅದಕ್ಕಾಗಿ ಅವನು ಮನೆಗೆ ಬರುವದಿಲ್ಲ. ತಿರುಗಿ ಹೋಗುವಾಗ ನನಗೆ ಭಯ ಬರುತ್ತದೆಂದು ನಾನು ನಮ್ಮ ತಾಯಿಗೆ ಸಾಲೆಗೇ ಹೋಗುವದಿಲ್ಲ ಅಂದೆ. ಆಗ ನನ್ನ ತಾಯಿ ಹೇಳಿದಳು— ಅಲ್ಲೇ ಅಡವಿಯಲ್ಲಿ ನಿನ್ನ ಅಣ್ಣ ಇದ್ದಾನೆ. ಅಂಜಿಕೆ ಎನಿಸಿದಾಗ ಅವನನ್ನು ಕರೆ ಅಂದರೆ ಅವನು ಬಂದು ನಿನ್ನನ್ನು ಊರ ವರೆಗೆ ಮುಟ್ಟಿಸುತ್ತಾನೆ. ಆ ದಿನ ನಾನು ಅವನನ್ನು ಕರೆದೆ. ಅಣ್ಣ ಬಂದ.

ದಿನಾಲು ನನಗೆ ಅವನು ಮನೆಯ ವರೆಗೆ ಮುಟ್ಟಿಸುತ್ತಾನೆ. ಈ ಗಡಿಗೆ ಕೊಟ್ಟವನೂ ಅವನೇ."

ಹೀಗೆ ಮಾತಾಡುತ್ತ ಇಬ್ಬರೂ ಅಡವಿಗೆ ಬಂದರು. "ಅಣ್ಣಾ ! ಅಣ್ಣಾ ! ನಮ್ಮ ಮಾಸ್ತರರು ಬಂದಿದ್ದಾರೆ ನಿನ್ನ ಭೆಟ್ಟಿಗೆ. ಬಾ ಶೀವ್ರ ಬಾ" ಎಂದು ಗೋಪಾಲ ಕೂಗಿದ. ಎಲೆಗಳ ಸಪ್ಪಳವಾಗಲಿಲ್ಲ. ಬಳ್ಳಿಗಳು ಅಲ್ಲಾಡಲಿಲ್ಲ ಅಂದು. ಸೊಗಸಾದ ಆ ಮುಖ ಕಾಣಲೊಲ್ಲದು.

ಮಾಸ್ತರ "ಗೋಪಾಲ! ನೀನು ಎಷ್ಟು ಸುಳ್ಳು ಆಡುತ್ತೀಯೋ? ಈ ಅಡವಿಯಲ್ಲಿ ಹುಲಿ ತೋಳ ಅವೆ. ಎಲ್ಲೀ ಅಣ್ಣ ಎಲ್ಲೀ ಆತನ? ಹೇಳು ಇನ್ನೂ ಸತ್ಯವಾಗಿ ಹೇಳು, ನಿನಗೆ ಮೊಸರು ಗಡಿಗೆ ಕೊಟ್ಟವರಾರು?" ಎಂದು ನುಡಿದರು.

ಗೋಪಾಳ ಕಳವಳಗೊಂಡು ಆರ್ತದನಿಯಿಂದ ಹೇಳಿದ. "ಇಲ್ಲ ಮಾಸ್ತರರೇ ! ನನಗೆ ಸುಳ್ಳ ಅನ್ನಬೇಡಿರಿ. ನಿಜವಾಗಿ ನನ್ನ ಅಣ್ಣಾ ನನಗೆ ಕೊಟ್ಟಿದ್ದಾನೆ." ಮತ್ತೆ ಕಳವಳಗೊಂಡು ಆರ್ತಸ್ವರದಿಂದ ಅಂದ "ಅಣ್ಣಾ ಅಣ್ಣಾ ! ನಾನು ದಿನಾಲು ನಿನಗೆ ತ್ರಾಸಕೊಡುತ್ತೇನೆಂದು ಬರುವದಿಲ್ಲವೆ ? ಬೇಡ, ಬೇಡ; ನನ್ನ ಮೇಲೆ ಹೀಗೆ ಕೋಪಿಸಬೇಡ. ಬೇಕಾದರೆ ನಾಳೆ ಯಿಂದ ಬರಬೇಡ. ಮಾಸ್ತರರು ನನಗೆ ಸುಳ್ಳ ಅನ್ನುತ್ತಾರೆ. ಅದಕ್ಕಾದರೂ ಬಾ, ಬಾ, ಅಣ್ಣಾ, ಬಾ."

ಅಣ್ಣ ಬರಲಿಲ್ಲ; ಆದರೆ ಗಿಡದ ಕಡೆಯಿಂದ ಅಡವಿಯೊಳಗಿಂದ ಗಂಭೀರವಾದ ವಾಣಿ ಕೇಳಿಬಂದಿತು. ಏನಿತ್ತು ಆ ವಾಣಿ !

" ಇಲ್ಲ, ನಾನು ಬರುವದಿಲ್ಲ. ನಿನ್ನ ತಾಯಿಯ ಶ್ರದ್ಧೆ ನನ್ನ ಮೇಲೆ ಇದ್ದಷ್ಟು ನಿನ್ನ ಗುರುಗಳದು ಇಲ್ಲ. ಶ್ರದ್ಧೆ ಭಾವವಿದ್ದಲ್ಲಿ ದೇವರು. ಒಲುಮೆ ಇದ್ದಲ್ಲಿ ನಾನು." ಎಂಬುದೇ ಆ ವಾಣಿ.



# ದೊಡ್ಡ ತ್ಯಾಗ



ಚೈತನ್ಯರು ಬಂಗಾಲ ಪ್ರಾಂತದಲ್ಲಿ ಆಗಿ ಹೋದ ಒಬ್ಬ ಹಿರಿದಾದ ಭಕ್ತರು. ಬಂಗಾಲದಲ್ಲಿ ಇವರು ವೈಷ್ಣವ್ಯ ಧರ್ಮವನ್ನು ಹಬ್ಬಿಸಿದರು. ಭಕ್ತಿಭಾವದ ಸವಿಯನ್ನು ಜನಸಾಮಾನ್ಯಕ್ಕೆ ಉಣಿಸಿದರು. ಭಕ್ತನಾಗುವ ಮೊದಲು ಚೈತನ್ಯರು ಹೆಸರಾದ ಪಂಡಿತರಾಗಿದ್ದರು. ನ್ಯಾಯಶಾಸ್ತ್ರದಲ್ಲಿ ಯಂತೂ ಇವರ ಕೈಹಿಡಿಯುವವರೇ ಇದ್ದಿಲ್ಲ.

ಒಂದು ದಿನ ಚೈತನ್ಯರು ದೋಣಿಯಲ್ಲಿ ಕೂಡಲು ನದಿದಂಡೆಗೆ ಬಂದರು. ಅವರ ಹತ್ತರ ವಿಶೇಷ ಸಾಮಾನು ಇದ್ದಿಲ್ಲ. ಒಂದು ಚೀಲ ಅವರ ಹತ್ತಿರ ಇತ್ತು. ಹೋಗುವವರ ಜಾತ್ರೆಯೇ ಕೂಡಿತ್ತು ನದಿ ದಂಡೆಯ ಮೇಲೆ. ಇಷ್ಟರಲ್ಲಿ ದೋಣಿ ಹೊರಡುವದಿತ್ತು. ಜನ ನುಗ್ಗು ತ್ತಿತ್ತು. ಚೈತನ್ಯರು ಹರಗೋಲಿನಲ್ಲಿ ಕೂತಿದ್ದರು. ದೋಣಿ ಹೊರಟಿತು. ಹೊಳೆಯ ವಿಶಾಲವಾದ ಭವ್ಯವಾದ ಒಡಲಲ್ಲಿ ದೋಣಿ ಮುಂದರಿಯ ತೊಡಗಿತು.

ಸೂರ್ಯಪ್ರಕಾಶ ಸ್ವಚ್ಛವಾಗಿ ಬಿದ್ದಿತ್ತು. ಎರಡು ದಂಡೆಯ ಮೇಲೆ ಇದ್ದ ಪ್ರಚಂಡ ಮರಗಳು ದೂರಿನಿಂದ ಬಹಳ ಸುಂದರ ಕಾಣುತ್ತಿದ್ದವು. ಗಾಳಿಯೊಡನೆ ತೂಗಾಡಿ, ಅಲ್ಲಾಡಿ, ಬಾಗಿ ನದಿಗೆ ವಂದನೆಮಾಡುತ್ತಿದ್ದಂತೆ ಅವು ತೋರುತ್ತಿದ್ದವು. ಮಿಂಚಿನಂತೆ ಹೊಳೆಯುವ ಮಿನಾಗಳು ಅಲ್ಲಲ್ಲಿ ಕಾಣುತ್ತಿದ್ದವು. ಕೆಲವು ದೊಡ್ಡ ಮೀನಗಳಿದ್ದವು. ಅವು ತಲೆ ಮೇಲಕ್ಕೆತ್ತಿ ಬಾಹ್ಯ ಜಗತ್ತಿನ ನೋಟ ಕಾಣುತ್ತಿದ್ದವು. ಅವುಗಳ ತಲೆಗಳು ಸೂರ್ಯ ಕಿರಣದಿಂದ ಹೊಳೆಯುತ್ತಿದ್ದವು. ಮೀನಗಳನ್ನು ನೋಡಿ ಕೆಲವರು ತಲೆ ಗೊಂದು ಮಾತು ಆಡುತ್ತಿದ್ದರು “ ಉತ್ತಮ ಮೇಜವಾನಿ ಆಗಬಹುದು

ಒಂದೆರಡು ವಿಮಾನ ಹಿಡಿದರೆ” ಎಂದ ಒಬ್ಬ. “ಇಲ್ಲ ಬರೀ ಬಾಯಿಗೆ ನೀರು ಬಂದು ಏನು ಪ್ರಯೋಜನ?” ಎಂದ ಮತ್ತೊಬ್ಬ. “ತಿಂಡಿ ವಿಷಯದ ಹೊರ್ತು ನಿಮಗೆ ಬೇರೆ ವಿಷಯವೇ ಇಲ್ಲವೆ? ಮನುಷ್ಯನ ಜನ್ಮ ಬರಿ ತಿನಸಿಗೆ ಇದೆಯೇ?” ಎಂದು ಒಬ್ಬ ಮಹಾಶಯರು ಗಂಭೀರ ವಾಣಿಯಿಂದ ಅಂದರು.

ಈ ರೀತಿ ಮಾತು ನಡೆದಿದ್ದವು. ಬಿಸಿಲು ಎಲ್ಲರಿಗೂ ಬಡಿಯುತ್ತಿತ್ತು. ತಂಪುಗಾಳಿ ಇದ್ದುದರಿಂದ ಬಿಸಲಿನ ತಾಪ ಅಷ್ಟು ಅನಿಸುತ್ತಿರಲಿಲ್ಲ. ಚೈತನ್ಯರ ದೃಷ್ಟಿ ನದಿಯ ಮೇಲೆಯೇ ಇತ್ತು. ಹೊಳೆಯ ತೆರೆಗಳಂತೆ ಹೃದಯಸಾಗರದಲ್ಲಿ ಸಾವಿರಾರು ತೆರೆಗಳು ಏಳುತ್ತಿದ್ದವು. ಅಷ್ಟರಲ್ಲಿ ಯಾರೋ ಒಬ್ಬರು ಅವರ ಹತ್ತಿರ ಬಂದು, ಅವರ ಹೆಗಲ ಮೇಲೆ ಕೈ ಇಟ್ಟರು. ಚೈತನ್ಯಸಮಾಧಿಯಿಂದ ಎಚ್ಚರಾದರು. ನೋಡುತ್ತಾರೆ—ಅವರ ಚಿಕ್ಕಂದಿನಲ್ಲಿಯ ಗೆಳೆಯನೊಬ್ಬ ಅವನು.

“ಗದಾಧರ! ಎಷ್ಟು ವರ್ಷಗಳ ತರುವಾಯ ನಾವು ಭೆಟ್ಟಿಯಾದದ್ದು ಇಂದು? ಗುರುಗೃಹ ಬಿಟ್ಟ ಮೇಲೆ ಇದೇ ಮೊದಲನೆಯ ಭೆಟ್ಟಿ. ಎಷ್ಟು ಆನಂದ ನನಗೆ ಇಂದು ನಿನ್ನನ್ನು ನೋಡಿ?” ಚೈತನ್ಯರು ಹೀಗೆಂದು ಅವನನ್ನು ತಮ್ಮ ಹತ್ತಿರ ಕುಳ್ಳಿರಿಸಿದರು. ಇಬ್ಬರ ಮುಖದ ಮೇಲೂ ವಿದ್ಯೆಯ ತೇಜಸ್ಸು ಸೂಸುತ್ತಿತ್ತು. ಪಾವಿತ್ರ್ಯದ, ಚಾರಿತ್ರ್ಯದ ಪ್ರಭೆ ಅವರ ಮುಖದ ಮೇಲೆ ಸುತ್ತಲೂ ಪಸರಿಸಿತ್ತು. ರವಿಚಂದ್ರರಂತೆ ವಿದ್ವದ್ವಯರು ಶೋಭಿಸುತ್ತಿದ್ದರು. ಗಂಗೆಗೆ ಯಮುನೆ ಕೂಡಿದಂತಾಗಿತ್ತು. ಚೈತನ್ಯರ ಅಂಗಕಾಂತಿಯಂತೂ ಹಾಲಿನ ನೊರೆಯಂತೆ ಕಂಗೊಳಿಸುತ್ತಿತ್ತು. ಗದಾಧರರು ಸ್ವಲ್ಪ ಕಪ್ಪು. ಒಂದು ಸ್ವಲ್ಪಕಾಲ ಇಬ್ಬರೂ ಒಬ್ಬರ ಕೈ ಮತ್ತೊಬ್ಬರು ಹಿಡಿದು ಸುಮ್ಮನೆ ಕುಳಿತರು.

ಭಾವನೆಯ ನೆರೆ ಕಡಿಮೆಯಾಗಿ ಮಾತಿಗೆ ಕೊಂಚ ಅವಕಾಶ ಸಿಕ್ಕಿತು.

ಚೈತನ್ಯ :—ಗದಾಧರ ಹೇಗೆ ನಡೆದಿದೆ ನಿನ್ನದು? ಕಲಿಯುವವರೆಗೆ ಹಕ್ಕಿಗಳಂತಿದ್ದೆವು ನಾವು. ಪ್ರಪಂಚದ ಭಾರ ತಲೆಯ ಮೇಲೆ

ಬಂದ ಕೂಡಲೆ ಉಸಿರು ಸಿಕ್ಕಂತೆ ಆಗುತ್ತದೆ. ನೀನು ಮಾಡುವದೇನು ಈಗ? ಪ್ರಪಂಚದ ತಾಪ ಬಹಳವಿಲ್ಲವಲ್ಲ?

ಗದಾಧರ:—ಚೈತನ್ಯ, ಅಧ್ಯಯನ ಅಧ್ಯಾಪನ ಎರಡೂ ಚನ್ನಾಗಿ ನಡೆದಿವೆ. ಕೆಲವು ವಿದ್ಯಾರ್ಥಿಗಳು ಮನೆಯಲ್ಲಿದ್ದಾರೆ. ಅವರಿಗೆ ಕಲಿಸುತ್ತೇನೆ. ಸಿರಿವಂತ ಜಮೀನದಾರನೊಬ್ಬ ನನ್ನ ಖರ್ಚು ವೆಚ್ಚ ನೋಡಿಕೊಳ್ಳುತ್ತಾನೆ. ಜೀವನ ಆನಂದದಲ್ಲಿ ನಡೆದಿದೆ. ಗುರುಗೃಹದಲ್ಲಿ ಇರುವಾಗ ನಾವಿಬ್ಬರು ಆಡಿದ ಮಾತು, ಮಾಡಿದ ಬಡಿದಾಟ ಯಾವಾಗಾದರೊಮ್ಮೆ ವಿದ್ಯಾರ್ಥಿಗಳಿಗೆ ಹೇಳುತ್ತೇನೆ. ಚೈತನ್ಯ, ನಾವು ಬಡಿದಾಡಿದ್ದು ನಿಜ, ಆದರೆ ಅದು ಮರೆಯುತ್ತಿರುವದು ಅಷ್ಟೇ ಸಹಜ. ಮರೆತು ಹೋಗುವ ಬಡಿದಾಟಗಳನ್ನು ಬಡಿದಾಡುವದರಲ್ಲಿಯೇ ನಿಜವಾದ ಆನಂದವಿದೆ ಅಲ್ಲವೇ ಚೈತನ್ಯ?

ಚೈತನ್ಯ:— ಗದಾಧರ, ನೀನನ್ನುವದು ನಿಜ, ಆದರೆ ಜಗತ್ತು ಜಗಳ ಮರೆಯಲು ಸಿದ್ಧವಿರುವದಿಲ್ಲ. ಮತ್ತೆ ಮತ್ತೆ ಜಗಳ ತೆಗೆಯುವದರಲ್ಲಿಯೇ ತೊಡಗುತ್ತಿದೆ. ಈ ಜಗತ್ತು ಎಷ್ಟು ವಿಚಿತ್ರವಿದೆ! ನಾವು ವಿದ್ಯಾರ್ಥಿಗಳಿದ್ದಾಗ ಎಷ್ಟು ಮನೋರಾಜ್ಯ ಕಟ್ಟುತ್ತಿದ್ದೆವು. ಎಷ್ಟು ಕನಸು ಕಾಣುತ್ತಿದ್ದವು!

ಗದಾ:— ಹೌದು ಜ್ಞಾಪಕಕ್ಕೆ ಬರುತ್ತದೆ ಅದೆಲ್ಲ. ನೀನು ಒಂದು ದಿನ ಗುರುವಿಗೆ "ಇಡೀ ಜಗತ್ತೇ ಬೆರಗಾಗುವಂಥ ಒಂದು ನ್ಯಾಯಶಾಸ್ತ್ರ ಗ್ರಂಥವನ್ನು ಕುರಿತು ನಾನು ಬರೆಯುವೆ" ಎಂದು ಹೇಳಿದುದು ಇನ್ನೂ ನೆನಪಿದೆ. ಗುರುಗಳು ನಿನಗೆ ಆಶೀರ್ವದಿಸಿದರು.

ಚೈತನ್ಯ:— ಹೌದು ಗದಾಧರ, ನಾನು ಆಗ ಮಾಡಿದ ನಿಶ್ಚಯ, ಆ ಕನಸು ಈಗ ಕೃತಿಯಲ್ಲಿ ಬಂದಿದೆ. ನಾನು ನ್ಯಾಯಶಾಸ್ತ್ರವನ್ನು ಕುರಿತು ಒಂದು ಗ್ರಂಥವನ್ನು ಬರೆದಿದ್ದೇನೆ, ಅದು ಈಗ ಮುಗಿಯಲು ಬಂದಿದೆ. ಆ ಗ್ರಂಥ ನೋಡಿ ನಿನಗೆ ಬಹಳ ಆನಂದವಾಗುವದು.

ಗದಾಧರ:— ಎಲ್ಲಿದೆ ಆ ಹೊತ್ತಿಗೆ? ಈಗ ಇಲ್ಲಿ ಇದೆಯೇನು?

ಚೈತನ್ಯ :— ಅಹುದು, ಇದೆ.

ಬಳಿಕ ಚೈತನ್ಯರು ಚೀಲದೊಳಗಿದ್ದ ಕೈಬರಹದ ಹೊತ್ತಿಗೆ ಹೊರಗೆ ತೆಗೆದರು. ಅದು ಒಂದು ಸುಂದರವಾದ ವಸ್ತ್ರದಲ್ಲಿ ಕಟ್ಟಿದ್ದಿತು. ಬಹಳ ಆಸ್ಥೆಯಿಂದ ಬರೆದಿದ್ದರು ಚೈತನ್ಯರು ಅದನ್ನು. ಗದಾಧರನ ಕೈಯಲ್ಲಿ ಆ ಹೊತ್ತಿಗೆ ಕೊಟ್ಟರು. ಗದಾಧರ ತನ್ನ ತೊಡೆಯ ಮೇಲಿಟ್ಟುಕೊಂಡು ಓದತೊಡಗಿದ. ಚೈತನ್ಯರ ಅಕ್ಷರ ಮುತ್ತಿನಂತೆ ಇದ್ದುವು. ಪುಟಗಳನ್ನು ತಿರುವುತ್ತ ಗದಾಧರ ಓದುತ್ತಿದ್ದ. ಕೆಲವು ಸಮಯದ ಮೇಲೆ ಅವನ ಮುಖ ಖಿನ್ನವಾಯಿತು. ಮುಂದೆ ಓದುವದನ್ನು ನಿಲ್ಲಿಸಿದ. ಗ್ರಂಥ ಕಟ್ಟಿ ಚೈತನ್ಯರ ಕೈಯಲ್ಲಿ ಕೊಟ್ಟ. ಏನೂ ಮಾತನಾಡಲಿಲ್ಲ. ನಿಟ್ಟುಸಿರು ಬಿಟ್ಟ.

ಮುಗಿಲಲ್ಲಿ ಮೋಡಗಳು ಬಂದುವು. ಸೂರ್ಯನನ್ನು ಮುತ್ತಿದವು. ಡೋಣಿಯೊಳಗಿದ್ದ ಹುಡುಗರಿಗೆ ಹೆಂಗಸರಿಗೆ ಬಿಸಿಲು ತಾಕಬಾರದೆಂದು ಬಂದಿದ್ದವು ಅವು. ಎಲ್ಲರಿಗೂ ಸಂತೋಷವಾಯಿತು. ಆದರೆ ಅಷ್ಟರಲ್ಲಿ ಗಾಳಿ ಬೀಸತೊಡಗಿತು. ಕಾರ್ಮೋಡಗಳು ಗುಂಪು ಗುಂಪಾಗಿ ಸುಳಿದಾಡುತ್ತಿದ್ದವು. ಬಿರುಗಾಳಿಯ ಲಕ್ಷಣ ತೋರಿತು. ಹೊಳೆಯಲ್ಲಿ ದೊಡ್ಡ ತೆರೆಗಳು ಏಳತೊಡಗಿದವು. ಡೋಣಿ ಭರದಿಂದ ಅಲ್ಲಾಡತೊಡಗಿತು. ಜನ ಭಯಭೀತರಾದರು. ತಾಯಂದಿರು ಹಸುಗೂಸುಗಳನ್ನು ಅಪ್ಪಿಕೊಂಡು "ಅಯ್ಯೋ ನಾವು ಮಾಡಿದ ಪಾಪವಾದರೂ ಯಾವುದು? ಅದಕ್ಕಾಗಿ ಈ ಬಿರುಗಾಳಿ ಬಂದಿತೆ!" ಎಂದು ಗೋಳಾಡತೊಡಗಿದರು.

ಪ್ರಸನ್ನವಾದ ಮುಗಿಲು ಕಾರ್ಮೋಡಗಳಿಂದ ಮುಸುಕಿತು. ಗಳಿಗೆ ಹೊತ್ತಿನ ಹಿಂದೆ ಮುಗಿಲು ಸ್ವಚ್ಛ ಇತ್ತೆಂದು ಹೇಳಿದರೆ ಯಾರೂ ನಂಬುವ ಹಾಗಿದ್ದಿಲ್ಲ. ನಿಸರ್ಗಕ್ಕೆ ಸ್ಥೈರ್ಯ ಕಡಿಮೆ; ನಿಸರ್ಗವು ಲಹರಿಯಾಗಿದೆ. ಮನುಷ್ಯ ನಿಸರ್ಗವ ಬಾಲಕ. ಒಂದು ಕ್ಷಣದ ಪೂರ್ವದಲ್ಲಿ ಪ್ರಸನ್ನ

ಮುಖನಾದ ಗದಾಧರ ಈಗ ವಿಷಣ್ಣವದನನಾಗಿದ್ದಾನೆ! ನೋಡಿ! ಅವನ ಮುಖ ಸಹ ಎಷ್ಟು ಕಪ್ಪಾಗಿದೆ! ಅವನ ಹೃದಯಾಕಾಶದಲ್ಲಿಯು ಸೂರ್ಯ ಅಸ್ತವಾಗಿದ್ದಂತೆ ತೋರುತ್ತದೆ. ಏನು ಕಾರಣ ಇದಕ್ಕೆ?

ಚೈತನ್ಯ:— ಗದಾಧರ, ಏನಾಗಿದೆ ನಿನಗೆ? ಒಮ್ಮೆಲೆ ಈ ಗ್ರಂಥ ಮುಚ್ಚಿಬಿಟ್ಟೆಯಲ್ಲ? ಮನೆಯ ದುಃಖ ನೆನಪಾಗಿದೆಯೋ ನಿನಗೆ? ಎಲ್ಲಿಯಾದರೂ ನೋವಾಗಿದೆ ಏನು? ಹೇಳು, ಹೇಳು ನನಗೆ. ಹೊರಗಂತೂ ಒಮ್ಮೆಲೆ ಬಿರುಗಾಳಿ ಬಂದಿದೆ. ನಿನಗೆ ಒಮ್ಮೆಲೆ ಏನಾಗಿದೆ?

ಗದಾಧರ ಮಾತನಾಡಲಿಲ್ಲ. ಅವನ ಕಣ್ಣೊಳಗೆ ಒಂದೆರಡು ಹನಿ ಮಾತ್ರ ಕಂಡವು; ಮುಖ ತಿರುವಿ ಒರಸಿಕೊಂಡ. ಚೈತನ್ಯ ಒಂದೆರಡು ನಿಮಿಷ ಅವನನ್ನು ನೋಡಿದ್ದ, ಆದರೆ ಈ ಸ್ತಬ್ಧತೆ ಅವನಿಗೆ ಅಸಹ್ಯವಾಯಿತು. ಹೃದಯ ತುಂಬಿ ಬಂದಿತು. ಗದಾಧರ ಚೈತನ್ಯನ ಕೈಯನ್ನು ತನ್ನ ಕೈಯಲ್ಲಿ ಹಿಡಿದ. ಆ ನಿರ್ಮಲ ಕೈಗಳ ಮೇಲೆ ಒಂದೆರಡು ಕಂಬನಿ ಉರುಳಿದವು. ಚೈತನ್ಯ ಚೇತರಿಸಿದರು ಮತ್ತು ದುಃಖಿಯಾದರು.

ಚೈತನ್ಯ:— ಗದಾಧರ, ನಾವು ಇಂದು ಬಹಳ ವರ್ಷಗಳ ನಂತರ ಭೆಟ್ಟಿಯಾಗಿದ್ದೇವೆ. ನಿನ್ನ ವ್ಯಥೆ ನನಗೇಕೆ ಹೇಳುವದಿಲ್ಲ? ಗುರುಗೃಹದಲ್ಲಿದ್ದಾಗ ನಿನ್ನ ಸುಖದುಃಖಗಳನ್ನೆಲ್ಲ ನನಗೆ ಹೇಳುತ್ತಿದ್ದಿ. ನಿನಗೆ ಹೊಟ್ಟೆಶೂಲಿಯಾದರೆ ನಾನು ಎಣ್ಣೆ ಹಚ್ಚಿ ತಿಕ್ಕುತ್ತಿದ್ದೆ. ಆಗಿನ ಚೈತನ್ಯ ಇಂದು ಬೇರೆಯವನಾದನೇ ನಿನಗೆ? ನಿನ್ನ ಸುಖದುಃಖದ ಮಾತು ಕೇಳಲು ನಾನು ಯೋಗ್ಯನಿಲ್ಲವೇ? ಗದಾಧರ, ಚಿಕ್ಕವನಿದ್ದಾಗ ನಿನ್ನ ಕಂಬನಿ ಒರೆಸಿದಂತೆ ಇಂದಾದರೂ ಒರೆಸಲು ನಾನು ನೆರವಾಗುವೆನು. ಶಕ್ಯವಿದ್ದರೆ ನಿನ್ನ ದುಃಖ ನಾನು ದೂರ ಮಾಡುವೆ. ಪರಸ್ಪರರ ಕುಂದು ಕೊರತೆಗಳನ್ನು ದೂರ ಮಾಡಿ, ಒಬ್ಬರಿಗೊಬ್ಬರು ನೀಡುವ ಸಹಾಯಕ್ಕಿಂತ ಹೆಚ್ಚಿನ ವಸ್ತುವಾವುದು ಈ ಜಗತ್ತಿನಲ್ಲಿ? ನೂರಾರು ಹೊತ್ತಿಗೆಗಳನ್ನು ಬರೆಯುವದಕ್ಕಿಂತ, ಒಬ್ಬ ದುಃಖಿತನ ಕಂಬನಿ ಒರೆಸುವದು, ದುಃಖ ದೂರ ಮಾಡುವದು ಶ್ರೇಷ್ಠವಾದುದೆಂದು ನನ್ನ ಭಾವನೆ. ಆದರೂ

ಪಾಂಡಿತ್ಯವನ್ನು ತೋರಿಸುವ, ಕೀರ್ತಿಗಳಿಸುವ ಆಸಕ್ತಿ ಇನ್ನೂ ನನ್ನನ್ನು ಬಿಟ್ಟಿಲ್ಲ. ಮೋಹಗಳಿವು. ಈ ಮೋಹಗಳನ್ನು ಗೆಲ್ಲುವದು ಕಠಿಣವಾದ ಸಂಗತಿ. ಅದಿರಲಿ, ನಿನ್ನ ದುಃಖ ತಿಳಿದುಕೊಳ್ಳುವದನ್ನು ಬಿಟ್ಟು ನಾನು ನಿನಗೊಂದು ಪ್ರವಚನವನ್ನೆ ಹೇಳಿದೆನಲ್ಲ. ಹೇಳು, ಗೆಳೆಯ, ಹೇಳು ನಿನ್ನ ವ್ಯಥೆ ಏನಿದೆ ಎಂಬುದನ್ನು. ತನ್ನ ಗೆಳೆಯ ತನ್ನ ದುಃಖ ಹೇಳುವದಿಲ್ಲ, ಇದಕ್ಕಿಂತ ಹೆಚ್ಚಿನ ದುರ್ದೈವ, ದುರ್ಭಾಗ್ಯ ಯಾವುದು ಹೇಳು ಗೆಳೆಯ ?

ಗದಾಧರ:— ಚೈತನ್ಯ, ಹೇಗೆ ಹೇಳಲಿ? ಏನು ಹೇಳಲಿ? ನಿಜವಾಗಿ ಯಾವ ಮಾತಿನಿಂದ ನನಗೆ ಆನಂದವಾಗಬೇಕೊ, ಅದೇ ನನ್ನ ದುಃಖದ ಮೂಲವಾಗಿದೆ. ನನ್ನ ದುಃಖ ನಿನ್ನ ಎದುರು ತೋಡಿಕೊಳ್ಳಲು ನನಗೆ ನಾಚಿಕೆ. ಆದರೆ ಸುಳ್ಳಾದರೂ ಹೇಗೆ ಆಡಲಿ? ಚೈತನ್ಯ, ನಾನೂ ನ್ಯಾಯ ಶಾಸ್ತ್ರದ ಮೇಲೆ ಒಂದು ಹೊತ್ತಿಗೆ ಬರೆದಿದ್ದೇನೆ. ನಿನ್ನ ಹೊತ್ತಿಗೆ ಓದಿ ನನಗೆ ನಾಚಿಕೆಯೆನಿಸಿತು. ಸೂರ್ಯನೆದುರು ಹೊನ್ನಿಹುಳ, ಗರುಡನೆದುರು ಗುಂಗಾಡು, ಸಮುದ್ರದೆದುರು ಗುಂಡಿ ಇದ್ದ ಹಾಗೆ ನಿನ್ನ ಹೊತ್ತಿಗೆಯ ಎದುರು ನನ್ನದು ! ನನ್ನ ಹೊತ್ತಿಗೆ ಪಂಡಿತರ, ಜಗತ್ತಿನ ಮನ್ನಣೆ ಹೊಂದುವದೆಂದು ಅಭಿಮಾನ ಎನಗಿತ್ತು. ಆದರೆ ನಿನ್ನ ಹೊತ್ತಿಗೆ ನೋಡಿ ನನ್ನ ಅಭಿಮಾನ ಲೋಪವಾಯಿತು. ನಿನ್ನ ಗ್ರಂಥವಿದ್ದಾಗ ನನ್ನ ಗ್ರಂಥ ಮುಟ್ಟುವವರಾರು ? ಹೊನ್ನು ಸಿಕ್ಕಾಗ ಮಣ್ಣು ಹಿಡಿಯುವವರಾರು ? ನಿನ್ನ ಹೊತ್ತಿಗೆ ನೋಡಿ ನನಗೆ ನಿಜವಾಗಿ ಆನಂದವಾಗಬೇಕು; ಆದರೆ ಇಷ್ಟು ವರ್ಷಗಳ ಆಸೆ ಇಂದು ಮಣ್ಣುಗೂಡಿತಲ್ಲ ಎಂಬುದೇ ದುಃಖ ನನಗೆ. ಈ ನಿರಾಶೆ ಸಹಿಸುವ ಧೈರ್ಯ ನನಗಿಲ್ಲ. ಚೈತನ್ಯ, ಎಷ್ಟಾದರೂ ನಾನು ಮನುಷ್ಯಪ್ರಾಣಿ. ನಿನ್ನ ವಿಷಯದಲ್ಲಿ ನನ್ನಲ್ಲಿ ಮತ್ಸರವೇನೂ ಇಲ್ಲ; ಆದರೆ ಘೋರ ನಿರಾಶೆಯೇ ನನ್ನ ದುಃಖಕ್ಕೆ ಕಾರಣವಾಗಿದೆ. ನಿದಾನವಾಗಿ ಈ ನಿರಾಸೆಯನ್ನು ನಾನು ಗೆಲ್ಲುವೆ. ಚೈತನ್ಯ, ನನ್ನಲ್ಲಿ ನಿನಗೆ ತಿರಸ್ಕಾರವೆ? ಎಂಥ ಗೆಳೆಯ ಇವ ಎಂದೀ ಬಹುದು ನೀನು ! ಕ್ಷಮಿಸು, ಸತ್ಯವಾದುದನ್ನು ಹೇಳಿದೆ. ನಿನ್ನನ್ನು ನೋಡಿ ನನಗೆ ಬಹಳ ಆನಂದ. ಆದರೆ ನಿನ್ನ ಹೊತ್ತಿಗೆ ಓದಿ ನನಗೆ ಬಹಳ ನಿರಾಶೆಯಾಯಿತು.

ಚೈತನ್ಯ:—ಗದಾಧರ !

ಚೈತನ್ಯರ ಕಂಠದಿಂದ ಮಾತು ಹೊರಡಲೊಲ್ಲವು. ಗೆಳೆಯರಿಬ್ಬರು ಹೊಳೆಹರಿಯುವದನ್ನು ನೋಡುತ್ತಿದ್ದರು. ಬಿರುಗಾಳಿ ಬರುವದಿತ್ತು. ಆದರೆ ಮೋಡಗಳು ಹಾರಿಹೋದವು. ಮತ್ತೆ ಆಕಾಶ ನಿರ್ಮಲವಾಯಿತು ಜನರಿಗೆಲ್ಲ ಸಂತೋಷವೆನಿಸಿತು. ಡೋಣಿ ಝುರ ಝುರ ನಡೆಯಿತು. ಇನ್ನೊಂದು ಗಳಿಗೆಯಲ್ಲಿ ದಂಡೆಗೆ ಹತ್ತುವದೆಂದು ಅಂಬಿಗ ಹೇಳಿದ.

ಚೈತನ್ಯ ವಿಚಾರದಲ್ಲಿ ಮುಳುಗಿದ್ದರು. ಮುಖಚರ್ಯೆ ಗಂಭೀರವಾಗಿತ್ತು. ಕಣ್ಣು ಸ್ಥಿರವಾಗಿದ್ದವು. ಅವರ ಕಣ್ಣಿನಲ್ಲಿ ನಲಿವು, ಕರುಣೆ ಮುಂತಾದ ಭಾವಗಳ ಮಿಶ್ರಣ ಕಾಣುತ್ತಿತ್ತು. ಅವರ ತೊಡೆಯ ಮೇಲೆ ಅವರ ಹೊತ್ತಿಗೆ ಇತ್ತು. ಅದು ಒಂದು ಸುಂದರವಾದ ಬಟ್ಟೆಯಲ್ಲಿ ಕಟ್ಟಿತ್ತು. ಹೊತ್ತಿಗೆ ಕೈಯಲ್ಲಿ ತಕ್ಕೊಂಡರು. "ಏನಿದು, ಏನಿದು" ಎಂದು ಗದಾಧರ ಅನ್ನುತ್ತಿರುವಷ್ಟರಲ್ಲಿ ಚೈತನ್ಯರು ಹೊಳೆಯ ವಿಶಾಲವಾದ ಒಡಲಲ್ಲಿ ಆ ಹೊತ್ತಿಗೆಯನ್ನು ಬಿಸಾಟಿ ಬಿಟ್ಟರು. ಹೊಳೆಯ ಗಂಭೀರ ಪ್ರವಾಹವು ಸಹಸ್ರ ತೆರೆಗಳಿಂದ ಗ್ರಂಥವನ್ನಪ್ಪಿಕೊಂಡು, ತನ್ನ ಹೊಟ್ಟೆಯಲ್ಲಿಟ್ಟುಕೊಂಡಿತು.

ಚೈತನ್ಯರ ಗಂಭೀರ ಮುಖಚರ್ಯೆಯ ಮೇಲೆ ಪ್ರೇಮವು ಒಡೆದು ಕಾಣುತ್ತಿತ್ತು. ಸರೋವರದ ಮೇಲ್ಭಾಗದ ಮೇಲೆ ತಾವರೆಗಳು ಅರಳಿದಂತೆ ಅವರ ಮುಖವಾಗಿತ್ತು. ಚೈತನ್ಯರ ಮುಖದ ಮೇಲೆ ಇದ್ದ, ಆ ಕೋಮಲ ಕಾಂತಿಯನ್ನು ಬಣ್ಣಿಸುವರಾರು ?

ಗದಾಧರ:—ಚೈತನ್ಯ, ಏನು ಮಾಡಿದೆ, ಏನು ಮಾಡಿದೆ ? ನೀನು ಹೀಗೆ ಮಾಡಿದ್ದರಿಂದ ನನಗೆ ಆನಂದವಾಗುವದೇನು ? ಈ ನಿನ್ನ ಕೃತ್ಯದಿಂದ ನನಗೆ ಎಂದಿಗೂ ಅಳಿಸದಂಥ ಅಪಕೀರ್ತಿ ಬರುವದು ಮತ್ತು ನಿನ್ನ ಹೆಸರು ಅಜರಾಮರವಾಗಿ ಉಳಿಯುವದು. ಗೆಳೆಯಾ, ಚೈತನ್ಯ ! ಎಂಥ ಅಮೂಲ್ಯವಾದ ಹೊತ್ತಿಗೆಯನ್ನು ನೀರುಪಾಲು ಮಾಡಿದೆಯಲ್ಲ !

ನಿಮಿಷಮಾತ್ರವಾದದ್ದು ನನ್ನ ನಿರಾಶೆ. ಅದು ಅಳಿದು ಹೋಗುತ್ತಿತ್ತು. ಆದರೆ ನೀನು ಜಗತ್ತಿಗೆ ಎಂದಿಗೂ ತುಂಬಿ ಬರದಂಥ ಹಾನಿಮಾಡಿ ಬಿಟ್ಟೆಯಲ್ಲ? ಈ ಹಾನಿಯನ್ನು ನೀನು ಮಾಡಿಲ್ಲ, ನಾನೇ ಮಾಡಿದ್ದೇನೆ. ನನ್ನ ಮುಖಚರ್ಯೆ ಬದಲಾಗದಿದ್ದರೆ, ನನ್ನ ದುಃಖ ನಿನ್ನ ಎದುರು ತೋಡದಿದ್ದರೆ ಹೀಗಾಗುತ್ತಿರಲಿಲ್ಲ. ಗೆಳೆಯಾ ಚೈತನ್ಯ—!

ಚೈತನ್ಯ:—ಗದಾಧರ, ಆದದ್ದೆಲ್ಲ ಒಳಿತೆ ಆಯಿತು. ನಿನ್ನ ಹೊತ್ತಿಗೆ ಉಳಿಯಲಿ. ಅದರಲ್ಲಿಯೇ ನನಗೆ ಆನಂದ. ಹೊತ್ತಿಗೆ ಬರೆಯುವಾಗ ನನಗೆ ಅನಿಸತಿತ್ತು—ಏತಕ್ಕಾಗಿ ನಾನು ಇದನ್ನೆಲ್ಲ ಬರೆಯುವುದು? ಎಂದು. ಹೃದಯದಲ್ಲಿ ಎಲ್ಲಿಯೋ ಇಂತಹದೊಂದು ಕೇಳಿಕೆ ನನಗೆ ಕೇಳಿಸುತ್ತಿತ್ತು.

ಆದರೆ ಆ ಮಂಜುಲ ದನಿಗೆ, ದೇವರ ವಾಣಿಗೆ, ಹೃದಯದಲ್ಲಿದ್ದ ಅಂತ ರ್ವಾಣಿಗೆ ನಾನು ಕಿವಿಗೊಡಲಿಲ್ಲ. ಆಸಕ್ತಿಯನ್ನು ನಾವು ಗೆಲ್ಲಲೇಬೇಕು. ನಿನ್ನ ಮೇಲೆ ಉಪಕಾರ ಮಾಡಬೇಕೆಂದಲ್ಲ, ಆದರೆ ಈ ಮೋಹ ಗೆಲ್ಲಲು ನಾನು ಈ ಹೊತ್ತಿಗೆಯನ್ನು ಹೊಳೆಗೆ ಅರ್ಪಿಸಿದೆ. ಆಸಕ್ತಿಯನ್ನು ಗೆಲ್ಲಲು- ಇಂಥ ನೂರಾರು ಗ್ರಂಥಗಳನ್ನು ಅರ್ಪಿಸಲು ನಾನು ಸಿದ್ಧನಾಗಬೇಕು. ಗದಾ, ಖಿನ್ನನಾಗಬೇಡ. ಒಬ್ಬನೇ ಗುರುವಿನ ಶಿಷ್ಯರಲ್ಲವೇ ನಾವಿಬ್ಬರೂ ನಿನ್ನ ಹೊತ್ತಿಗೆಯಲ್ಲಿ ನಾನೂ ಇದ್ದೇನೆ. ನಿನ್ನ ಹೊತ್ತಿಗೆ ಬಾಳಿ ತವರ ಕೀರ್ತಿ ಬೆಳೆಯಲಿ ನಿನ್ನ ಗ್ರಂಥದ ಅಭ್ಯಾಸ ಮಾಡದೆ, ನ್ಯಾಯಶಾಸ್ತ್ರದ ಅಭ್ಯಾಸ ಪೂರ್ಣವಾಗಿದ ಎಂದು ಯಾರೂ ಅನ್ನಲಾರರು. ನಿನ್ನ ಹೊತ್ತಿ ಗೆಯ ಪೂಜೆಯಾಗುವದು. ಅದು ಪಂಡಿತರಿಗೆ ಮಾನ್ಯವಾಗುವದು. ಏಳು ಗೆಳೆಯಾ, ನಗು, ನಗು ಮುಖನಾಗು; ಹೌದು, ನಿನ್ನ ಮುಖ ನಗುಮುಖವಾಗುತ್ತಲಿದೆ. ಬೇಡ ಹೀಗೆ ನಗುವನ್ನು ತಡೆಯಬೇಡ. ನೀನು ನಗಬೇಕು, ನಿನ್ನ ಕಣ್ಣಲ್ಲಿ ನೀರು ಬರಬಾರದು ಎಂಬುದಕ್ಕೆ ನನ್ನ ಹೊತ್ತಿಗೆಯನ್ನೇ ಏಕೆ, ನನ್ನ ಪ್ರಾಣವನ್ನಾದರು ಮುಡಿಪಾಗಿಡಲು ಸಿದ್ಧನಿದ್ದೇನೆ. ಜಗತ್ತಿಗೆ ಸುಖವನ್ನು ನೀಡಲು ಹೊರಟಿದ್ದೇನೆ ನಾನು. ಗೆಳೆಯನನ್ನು ನಗಿಸಲಾರೆನೇ ನಾನು? ನಿನ್ನಿಂದಲೇ ನನ್ನ ಆಶೆ ಅಂಕುರಿಸಲಿ.

ತ್ಯಾಗದ ಪ್ರೀತಿಯ ಪಾಠ, ಮೊದಲನೆಯ ಪಾಠ ಕಲಿಯಬೇಕು. ಮೊದಲನೆಯ ಹೆಜ್ಜೆ ಹಾಕುವದೇ ಕಠಿಣವಾದ ಮಾತು. ಗದಾ—!

ಹೀಗೆಂದು ಚೈತನ್ಯರು ಗೆಳೆಯನನ್ನು ಅಪ್ಪಿಕೊಂಡರು. ಗದಾಧರನ ಹೃದಯ ಉಕ್ಕೇರಿ ಬಂದಿತು. ಕಣ್ಣಲ್ಲಿ ಆನಂದದ ಕಂಬನಿಗಳು ಸುರಿಯ ತೊಡಗಿದವು. ಇಬ್ಬರ ಮುಖದ ಮೇಲೆ ಒಂದು ಅಪೂರ್ವವಾದ ತೇಜಸ್ಸು ಮೂಡಿತ್ತು. ಕೈಯಲ್ಲಿ ಕೈಹಾಕಿ ಹೊಳೆಯ ಹರಿಯುವಿಕೆ ದಿಟ್ಟಿಸಿ ನೋಡುತ್ತ ಇದ್ದರು. "ದಂಡೆ ಬಂದಿತು, ದಂಡೆ ಸಮೀಪಿಸಿತು" ಎಂದು ಅಂಬಿಗರು ಚೀರಾಡಲಾರಂಭಿಸಿದರು. ಜನ ತಮ್ಮ ಸಾಮಾನುಗಳ ಗಂಟು ಕಟ್ಟತೊಡಗಿದರು. ಚಿಕ್ಕಬಾಲಕರು ದಂಡೆಯತ್ತ ನೋಡತೊಡಗಿದರು. "ಬಿದ್ದೀರೋ, ಕೆಳಗೆ ಕೂತು ಕೊಳ್ಳಿರಿ" ಎಂದು ತಾಯಂದಿರು ಮಕ್ಕಳನ್ನು ಜಬರಿಸುತ್ತಿದ್ದರು. ಡೋಣಿಯ ಪಟ ಇಳಿಸಿದ್ದಾಯಿತು.

ಚೈತನ್ಯ:—ಗದಾದರ, ಪ್ರಪಂಚದ ಸಂಚಾರದಲ್ಲಿ ಇನ್ನು ಮತ್ತೆ ಎಂದು ನಮ್ಮ ಭೆಟ್ಟಿ ?

ಗದಾದರ:— ಚೈತನ್ಯ, ಇನ್ನು ಭೆಟ್ಟಿಯಾಗದಿದ್ದರೂ ನಾವು ಪರಸ್ಪರರನ್ನು ಮರೆಯುವದುಂಟೇ ! ನಿನ್ನ ನೆನಪು ನನಗೆ ದಿನಾಲು ಆಗುವದು. ನಿನ್ನ ನೆನಪು ಹೇಳುವಾಗ ನನ್ನ ಕಣ್ಣು ತುಂಬಿಬರುವವು. ಪ್ರೀತಿಯಿಂದ ತುಂಬಿದ ತ್ಯಾಗದಿಂದ, ತ್ಯಾಗದ ಒಪ್ಪಹಾಕಿದ ಪ್ರೀತಿಯಿಂದ ನಾವಿಬ್ಬರು ಬದ್ಧರಾಗಿದ್ದೇವೆ. ನಾನೇನೋ ಜಗತ್ತಿಗೆ ನ್ಯಾಯಶಾಸ್ತ್ರ ಕಲಿಸುವೆ. ಆದರೆ, ಚೈತನ್ಯ, ಗೆಳೆಯಾ, ನೀನು ಅಪೇಕ್ಷೆಯಿಲ್ಲದ ಪ್ರೀತಿ-ಶಾಸ್ತ್ರ ಜಗತ್ತಿಗೆ ಕಲಿಸುವಿ ! ನ್ಯಾಯಶಾಸ್ತ್ರದಂಥ ನೀರಸಶಾಸ್ತ್ರ ಕಲಿಸಲಿಕ್ಕೆ ಅಲ್ಲ ನಿನ್ನ ಅವತಾರ; ಮಂಗಲ ಪ್ರೇಮ ಕಲಿಸುವದಕ್ಕೆ ನಿನ್ನ ಅವತಾರ.

ಚೈತನ್ಯ:—ಪ್ರೀತಿ, ಪ್ರೀತಿ, ಪ್ರೀತಿ, ! ಅಹುದು, ದುಃಖಮಯ, ಕಷ್ಟಮಯ ಈ ಜಗತ್ತಿಗೆ ಪ್ರೀತಿಯ ಅವಶ್ಯಕತೆಯೇ ಇದೆ. ನನ್ನ

ಹೃದಯಸಾಗರವು ಪ್ರೀತಿಯಿಂದಲೇ ಉಕ್ಕೇರಲಿ ಮತ್ತು ಜಗತ್ತಿನಲ್ಲಿ ಎಲ್ಲೆಡೆಯಲ್ಲಿಯೂ ಹರಿಯಲಿ. ಶಿಷ್ಟನಿರಲಿ, ದುಷ್ಟನಿರಲಿ, ಎಲ್ಲರೂ ನನ್ನ ಪ್ರೀತಿಸಾಗರದಲ್ಲಿ ಮುಳುಗಿ ಏಳಲಿ ! ಇದೇ ನಾನು ಸಾಧಿಸುವ ಗುರಿ ಈ ಜೀವನದಲ್ಲಿ. ನನ್ನ ಜೀವನದ ಗುರಿ ಸಿಕ್ಕಿತು ನನಗೆ ಇಂದು.

ಗದಾಧರ:— ಜೀವನದ ಗುರಿ, ಮತ್ತು ಕಾರ್ಯ ಅರಿತವನೇ ಧನ್ಯ ಹಾಗೂ ಕೃತಕೃತ್ಯ.

